


# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 75

ಸಂಪುಟ: ೦೯ ಸಂಚಿಕೆ: ೮ Vol. 09 Issue: 8 | ಡಿಸೆಂಬರ್ ೨೦೨೧ December 2021 | ಪುಟಗಳು ೮ Pages - 8 | ವಾರ್ಷಿಕ ಚಂದ ರೂ. ೨೦/– A. Sub. - Rs. 20/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ Editor : Sri. B.R. Ravindranath



ಚಂದಾ ವಿವರಗಳು
ವಾರ್ಷಿಕ ಚಂದಾ : ರೂ. ೨೦/–
ಐದು ವರ್ಷಗಳ ಚಂದಾ : ರೂ. ೧೦೦/–

ಬಿ.ಎಂ.ಶ್ರೀ. ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ,
೩ನೇ ಮುಖ್ಯರಸ್ತೆ,
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ :೨೬೬೧೫೮೭೭
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಬೆಳಗ್ಗೆ 10–30ರಿಂದ ಸಂಜೆ 5–00ಗಂಟೆ.
ವಾರದ ರಜೆ : ಮಂಗಳವಾರ

೩೦–೧೧–೨೦೨೧

## ಶಾ. ಬಾಲೂರಾವ್ ಯುವಬರಹಗಾರ ಪ್ರಶಸ್ತಿ ಮತ್ತು ಶಾ. ಬಾಲೂರಾವ್ ಅನುವಾದ ಪ್ರಶಸ್ತಿ ಪ್ರದಾನ

ಪ್ರಶಸ್ತಿ ಪ್ರದಾನ : ಡಾ. ಜಿ.ಎನ್. ರಂಗನಾಥರಾವ್

ಶಾ. ಬಾಲೂರಾವ್ ಯುವಬರಹಗಾರ ಪ್ರಶಸ್ತಿ : ಶ್ರೀ ಹರೀಶ್ ಹಾಗಲವಾಡಿ

ಶಾ. ಬಾಲೂರಾವ್ ಅನುವಾದ : ಡಾ. ಪದ್ಮರಾಜ ದಂಡಾವತಿ



ಶಾ. ಬಾಲೂರಾವ್ ಯುವಬರಹಗಾರ ಪ್ರಶಸ್ತಿ ಹಾಗೂ ಶಾ. ಬಾಲೂರಾವ್ ಅನುವಾದ ಪ್ರಶಸ್ತಿಗಳ ಪ್ರದಾನ ಸಮಾರಂಭದಲ್ಲಿ ಖ್ಯಾತ ಪತ್ರಕರ್ತರು ಹಾಗೂ ಹಿರಿಯ ಸಾಹಿತಿಗಳಾದ ಡಾ. ಜಿ.ಎನ್.ರಂಗನಾಥರಾವ್ ಅವರು **ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ** ಯನ್ನು ಶ್ರೀ ಹರೀಶ್ ಹಾಗಲವಾಡಿಯವರಿಗೆ ಹಾಗೂ **ಶಾ. ಬಾಲೂರಾವ್ ಅನುವಾದ ಪ್ರಶಸ್ತಿಯನ್ನು** ಡಾ. ಪದ್ಮರಾಜ ದಂಡಾವತಿ ಅವರಿಗೆ ಪ್ರದಾನ ಮಾಡಿದರು. ಇಂಗ್ಲೀಷ್‌ನಿಂದ ಕನ್ನಡಕ್ಕೆ ಅನುವಾದಗೊಂಡ ಕನ್ನಡದ ಕೃತಿಗಳಿಗೆ ಅಕಾಡೆಮಿಗಳಲ್ಲಿ ಮನ್ನಣೆ ಸಿಗುತ್ತಿಲ್ಲ. ಅನುವಾದಕ್ಕೆ ಇನ್ನೂ ಹೆಚ್ಚು ಹೆಚ್ಚು ಬೆಂಬಲ ಹಾಗೂ ಉತ್ತೇಜನವನ್ನು ಅಕಾಡೆಮಿಗಳು ನೀಡಬೇಕು ಎಂದು ಡಾ. ಜಿ.ಎನ್. ರಂಗನಾಥ್ ಅವರು ಹೇಳಿದರು. ಶ್ರೀ ಹರೀಶ್ ಹಾಗಲವಾಡಿ ಅವರ ಪ್ರಶಸ್ತಿ ವಿಜೇತ 'ಋಷ್ಯಶೃಂಗ' ಕೃತಿಯ ಬಗ್ಗೆ ಆಯ್ಕೆ ಸಮಿತಿಯ ಸದಸ್ಯರಾಗಿದ್ದ ಡಾ. ಆನಂದರಾಮ ಉಪಾಧ್ಯರವರು ಮಾತನಾಡಿ ನಗರ ಜೀವನದ ಸಂಕೀರ್ಣ ಬದುಕಿನ ಎಳೆಎಳೆಗಳನ್ನು ಶ್ರೀ ಹರೀಶ್‌ರವರು ಮನಮುಟ್ಟುವಂತೆ ಚಿತ್ರಿಸಿದ್ದಾರೆ ಎಂದರು. ಪ್ರಶಸ್ತಿ ಸ್ವೀಕರಿಸಿದ ಶ್ರೀ ಹರೀಶ್‌ರವರು ಬಿ.ಎಂ.ಶ್ರೀ ಪ್ರತಿಷ್ಠಾನಕ್ಕೆ ಆಭಾರಿಯಾಗಿರುವುದಾಗಿ ಹೇಳಿ ತಾವು ಪ್ರಸ್ತುತದಲ್ಲಿ ಭಾರತೀಯ ಸಂಸ್ಕೃತಿಯ ಅಧ್ಯಯನದಲ್ಲಿ ತೊಡಗಿರುವುದಾಗಿ ಹೇಳಿದರು.

ಪ್ರಶಸ್ತಿ ಸ್ವೀಕರಿಸಿ ಮಾತನಾಡಿದ ಡಾ. ಪದ್ಮರಾಜ ದಂಡಾವತಿಯವರು 'ಆಂಗ್ಲ ಭಾಷೆಯಲ್ಲಿದ್ದ ದೇವದತ್ತ ಪಟ್ಟನಾಯಕ್ ಅವರು ರಚಿಸಿದ 'ಸೀತಾಯಣ' ಕೃತಿಯನ್ನು ಕನ್ನಡದ ಓದುಗರಿಗೆ' ಪರಿಚಯ ಮಾಡಿಕೊಟ್ಟ ಈ ಕಾರ್ಯ ನನಗೆ ಬಹಳ ಸಂತೋಷವನ್ನುಂಟು ಮಾಡಿದೆ. ಇದಕ್ಕಾಗಿ ಸಾಕಷ್ಟು ಶ್ರಮವೂ ಸೇರಿದೆ. ಇದನ್ನು ಪರಿಗಣಿಸಿ ನೀಡಲಾಗಿರುವ ಈ ಅನುವಾದ ಪ್ರಶಸ್ತಿಗಾಗಿ ತಾವು ಬಿ.ಎಂ.ಶ್ರೀ ಪ್ರತಿಷ್ಠಾನಕ್ಕೆ ಋಣಿಯಾಗಿರುವುದಾಗಿ ತಿಳಿಸಿದರು. ಈ ಕೃತಿಯನ್ನು ಓದಿದ ನಂತರ ರಾಮಾಯಣವೂ ಸಹ ಮಹಾಭಾರತದಷ್ಟೇ ಸಂಕೀರ್ಣ ರಚನೆ ಎನ್ನುವುದು ಅರ್ಥವಾಗುತ್ತದೆ. ಎರಡೂ ಮಹಾಕಾವ್ಯಗಳು ನಮಗೆ ಜೀವನ ಪಾಠಗಳನ್ನು ಕಲಿಸುತ್ತವೆ ಎಂದು ಅಭಿಪ್ರಾಯ ಪಟ್ಟರು.

'ಸೀತಾ' ಕೃತಿಯ ಬಗ್ಗೆ ಆಯ್ಕೆ ಸಮಿತಿಯ ಸದಸ್ಯರಾಗಿದ್ದ ನಿವೃತ್ತ ಆಂಗ್ಲ ಪ್ರಾಧ್ಯಾಪಕ ಹಾಗೂ ಖ್ಯಾತ ಅನುವಾದಕರಾದ ಡಾ. ಎಂ.ಎಸ್. ರಘುನಾಥ್‌ರವರು ಮಾತನಾಡಿ 'ಸೀತೆ' ಯ ಪಾತ್ರಕ್ಕೆ ಅಷ್ಟೂ ಮನ್ನಣೆ ಸಿಗದೇ ಇದ್ದರೂ ಅವಳ ಬಗ್ಗೆ ಹೆಚ್ಚು ಗೌರವವನ್ನು ಈ ಕೃತಿ ಉಂಟು ಮಾಡುತ್ತದೆ. ಅನೇಕ ಸಂಕಷ್ಟಗಳ ಸಂದರ್ಭಗಳಲ್ಲಿ ಅವಳು ಎಲ್ಲರೂ ಮೆಚ್ಚುವ ರೀತಿಯಲ್ಲಿ ವರ್ತಿಸಿ ಒಬ್ಬ ಆದರ್ಶ ಮಹಿಳೆಯಾಗಿದ್ದಾಳೆ ಎನ್ನುವುದನ್ನೂ ಈ ಕೃತಿ ಎತ್ತಿ ತೋರಿಸುತ್ತದೆ ಎಂದರು.

ದಿ|| ಶಾ.ಬಾಲೂರಾವ್‌ರವರ ಬದುಕು, ಸಾಧನೆ, ಬರಹಗಳ ಬಗ್ಗೆ ಡಾ. ಎಸ್. ಅನಿಲ್ ಕುಮಾರ್‌ರವರು ಮಾತನಾಡಿದರು.

– ೨ನೇ ಪುಟಕ್ಕೆ

ಸಂಪಾದಕೀಯ

೨೦೨೧ ಕೊನೆಗೊಳ್ಳುತ್ತಿದೆ. ಕರೋನಾ ತಂದ ಸಂಕಷ್ಟಗಳನ್ನು ಮರೆಯತೊಡಗಿದ್ದೇವೆ. ಎಲ್ಲೆಲ್ಲೂ ಹೊಸ ಹುರುಪಿನೊಂದಿಗೆ ಚಟುವಟಿಕೆಗಳು ಪ್ರಾರಂಭಗೊಂಡಿವೆ.

ಅಂತರ್ಜಾಲದ ಸಭೆಗಳ ಜೊತೆಜೊತೆಯಲ್ಲಿಯೇ ವಾಸ್ತವ ಸಭೆಗಳನ್ನು ಸಂಘಟಿಸಲಾಗುತ್ತಿದೆ. ಸಾಹಿತ್ಯ ಬಂಧುಗಳನ್ನು ಖುದ್ದಾಗಿ ಭೇಟಿಯಾಗಲು ಅವಕಾಶವಾಗುತ್ತಿದೆ.

ವಾಣಿಜ್ಯ ಚಟುವಟಿಕೆಗಳು ಹೆಚ್ಚಾಗುತ್ತಿರುವುದರಿಂದ ಬಹಳ ಜನರಿಗೆ ಅನುಕೂಲವಾಗುತ್ತಿರುವುದು ಸಮಾಧಾನಕರ ವಿಷಯ.

ಬರಲಿರುವ ೨೦೨೨ನೇ ಇಸವಿಯತ್ತ ಆಶಾಭಾವನೆಯಿಂದ ನೋಡೋಣ.

– ಬಿ.ಆರ್. ರವೀಂದ್ರನಾಥ್

೧ನೇ ಪುಟದಿಂದ

ಡಾ. ಹೆಚ್.ಎಸ್.ಎಂ. ಪ್ರಕಾಶ್ ಅವರು ಎಲ್ಲರನ್ನೂ ಸ್ವಾಗತಿಸಿ ಪರಿಚಯ ಭಾಷಣವನ್ನು ಮಾಡಿದರು.

ಅಧ್ಯಕ್ಷತೆ ವಹಿಸಿದ್ದ ಡಾ. ಬೈರಮಂಗಲ ರಾಮೇಗೌಡ ಅವರು ಪ್ರತಿಷ್ಠಾನದ ಕಾರ್ಯಕ್ರಮಗಳನ್ನು ರಾಜ್ಯವ್ಯಾಪ್ತಿ ನಡೆಸಲು ಮುಂದಿನ ದಿನಗಳಲ್ಲಿ ಪ್ರಯತ್ನಿಸಲಾಗುವುದು ಎಂದರು.

ನಿಕಟ ಪೂರ್ವ ಅಧ್ಯಕ್ಷರುಗಳಾದ ಡಾ.ಪಿ.ವಿ.ನಾರಾಯಣ ಹಾಗೂ ಡಾ. ಆರ್. ಲಕ್ಷ್ಮೀನಾರಾಯಣ ರವರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ಡಾ. ಎಸ್. ಅನಿಲ್ ಕುಮಾರ್‌ರವರು ವಂದನಾರ್ಪಣೆ ಮಾಡಿದರು.

## ಪ್ರಕಟಣೆ

### ೨೦೨೦ ನೇ ಸಾಲಿನ ಸಾರಂಗಿ ವೆಂಕಟರಾಮಯ್ಯ–ಪುಟ್ಟಚ್ಚಮ್ಮ ಸ್ಮಾರಕ ದತ್ತಿ ಪ್ರಶಸ್ತಿ

ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ಶ್ರೀ ಎಸ್.ವಿ.ಶ್ರೀನಿವಾಸರಾವ್ ಅವರು ಸ್ಥಾಪಿಸಿರುವ ದಿ|| ಸಾರಂಗಿ ವೆಂಕಟರಾಮಯ್ಯ–ಪುಟ್ಟಚ್ಚಮ್ಮ ದತ್ತಿ ನಿಧಿಯ ಅಡಿಯಲ್ಲಿ ೨೦೨೦ನೇ ಸಾಲಿನ ಪ್ರಶಸ್ತಿಗೆ ೨೦೨೦ರಲ್ಲಿ ಪ್ರಥಮ ಮುದ್ರಣವಾಗಿ ಪ್ರಕಟಗೊಂಡಿರುವ ನಾಟಕ ಕೃತಿಗಳನ್ನು ಆಹ್ವಾನಿಸಲಾಗಿದೆ.

ನಾಟಕದ ೩ ಪ್ರತಿಗಳನ್ನು ಪ್ರತಿಷ್ಠಾನದ ಕಚೇರಿಗೆ ದಿನಾಂಕ : ೧೨–೧೨–೨೦೨೧ ರಂದು ಅಥವಾ ಅದಕ್ಕಿಂತ ಮುಂಚಿತವಾಗಿ ತಲುಪಿಸಲು ಸೂಚಿಸಲಾಗಿದೆ.

ಪ್ರಶಸ್ತಿಯ ಮೊತ್ತ ೩,೦೦೦/– ರೂ.ಗಳು ಹಾಗೂ ಪ್ರಶಸ್ತಿ ಪತ್ರವನ್ನು ವಿಶೇಷ ಸಮಾರಂಭದಲ್ಲಿ ವಿತರಿಸಲಾಗುವುದು.

ಈ ಸ್ಪರ್ಧೆಯು ಉದಯೋನ್ಮುಖ ಸಾಹಿತಿಗಳಿಗೆ ಮಾತ್ರ ಸೀಮಿತವಾಗಿದ್ದು, ಅವರು ಗರಿಷ್ಠ ೨ ಕೃತಿಗಳನ್ನು ಮಾತ್ರ ಪ್ರಕಟಿಸಿರಬೇಕು. ಪ್ರಥಮ ಕೃತಿಗೆ ಆದ್ಯತೆ ನೀಡಲಾಗುವುದು.

೨೬–೦೯–೨೦೨೧

## ಪ್ರತಿಷ್ಠಾನದ 'ನಲವತ್ತರ ನಲಿವು'

### ಉದ್ಘಾಟನೆ, ಪುಸ್ತಕ ಬಿಡುಗಡೆ. ವಿಚಾರ ಸಂಕಿರಣ ಮತ್ತು ಕವಿಗೋಷ್ಠಿ

### ಮುಂದುವರೆದ ಭಾಗ – ವಿಚಾರ ಸಂಕಿರಣ

**ಡಾ. ಸಿ.ಯು. ಮಂಜುನಾಥ್**

**ವಿಷಯ : ಕನ್ನಡ ವಿದ್ವತ್ ಪತ್ರಿಕೆಗಳು ಮತ್ತು ಕರ್ನಾಟಕ ಲೋಚನ.**

ಕನ್ನಡ ಸಾಹಿತ್ಯವನ್ನು ಅಭಿವೃದ್ಧಿ ಪಡಿಸುವ ಸದುದ್ದೇಶದಿಂದ ಹಲವಾರು ಕನ್ನಡ ಸಂಸ್ಥೆಗಳು, ಮಠ, ಮಾನ್ಯಗಳು ಮತ್ತು ವಿಶ್ವವಿದ್ಯಾಲಯಗಳು, ಪಠ್ಯೇತರ ವಿಷಯಗಳನ್ನು ತಮ್ಮ ನಿಯತ ಕಾಲಿಕೆಗಳ ವಿದ್ವತ್ ಪತ್ರಿಕೆಗಳ ಮೂಲಕ ಕಾರ್ಯವನ್ನು ನಿರ್ವಹಿಸುತ್ತಿವೆ. ಈ ನಿಯತ ಕಾಲಿಕೆಗಳು ವಿದ್ಯಾರ್ಥಿಗಳಿಗೆ , ಜನಸಾಮಾನ್ಯರಿಗೆ ಜ್ಞಾನವನ್ನು ನೀಡಬಲ್ಲ ಸಾಹಿತ್ಯ, ಕಲೆ, ವಿಜ್ಞಾನ, ತತ್ವಶಾಸ್ತ್ರ, ಚರಿತ್ರೆ, ಧರ್ಮ, ನೀತಿ, ಸಂಸ್ಕೃತಿ, ಜಾನಪದ, ಸಾಮಾಜಿಕ, ಮಾನವಿಕ ಶಾಸ್ತ್ರ ಮುಂತಾದ ವಿಷಯಗಳನ್ನು ಒಳಗೊಂಡಿರುವ ಪ್ರಕಟಣೆಗಳೇ. ಡಾ. ಸಿ.ಯು. ಮಂಜುನಾಥ್ ಅವರು ಬಹಳ ಶ್ರಮವಹಿಸಿ, ಪ್ರಬುದ್ಧ ಕರ್ನಾಟಕ, ಜಯಂತಿ, ಅನಿಕೇತನ, ಕನ್ನಡ ಸಾಹಿತ್ಯ ಪರಿಷತ್ತಿನ ಪರಿಷತ್ಪತ್ರಿಕೆ, ಕನ್ನಡ ನುಡಿ, ಮಿಥಿಕ್ ಸೊಸೈಟಿಯ ತ್ರೈಮಾಸಿಕ ವಿದ್ವತ್ ಪತ್ರಿಕೆ ಪ್ರಚಾರೋಪನ್ಯಾಸ ಮಾಲೆಯ ಪುಸ್ತಕಗಳು, ಬೆಂಗಳೂರು ವಿಶ್ವವಿದ್ಯಾಲಯದ ಸಾಹಿತ್ಯ ವಾರ್ಷಿಕ ಮುಂತಾದ ವಿದ್ವತ್ ಪತ್ರಿಕೆಗಳಲ್ಲಿನ ವಿಷಯ ವೈವಿಧ್ಯತೆ, ಸ್ವರೂಪ, ಸಂಪಾದಕರು, ಅವುಗಳ ಕಾಲ, ಪ್ರಕಾಶಕರು ಮುಂತಾದ ಮಾಹಿತಿಗಳನ್ನು ಸಂಗ್ರಹಿಸಿ ವಿಷಯವನ್ನು ಮುಂಡಿಸಿದರು. ಕೆಲವು ವಿದ್ವತ್ ಪತ್ರಿಕೆಗಳ ಪ್ರಕಟಣೆಗಳು ನಿಂತುಹೋಗಿರುವ ಮಾಹಿತಿಯನ್ನು ನೀಡಿದರು.

ಪ್ರತಿಷ್ಠಾನದ ಷಾಣ್ಮಾಸಿಕ ವಿದ್ವತ್ ಪತ್ರಿಕೆ "ಕರ್ನಾಟಕ ಲೋಚನ"ವು ಈಗ ನಲವತ್ತೆರಡು ವಸಂತಗಳನ್ನು ಪೂರೈಸುತ್ತಿದೆ. ಲೋಚನವು ಈಗ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಸಾಹಿತ್ಯಾನುಸಂಧಾನದ ಪ್ರಾತಿನಿಧಿಕ ಮಾದರಿಯಾಗಿ ರೂಪುಗೊಳ್ಳುತ್ತಿದೆ. ಈ ಪತ್ರಿಕೆಯ ವಿಶೇಷತೆಯೆಂದರೆ, ವಿಮರ್ಶೆ ಸಂಶೋಧನೆಯೊಂದಿಗೆ ಕೈ ಜೋಡಿಸಿದೆ. ಇಂತಹ ವಿದ್ವತ್ ಪತ್ರಿಕೆಯೊಂದನ್ನು ಹೊರತರುವ ಸಂದರ್ಭದ ಸವಾಲುಗಳು ಅನೇಕ. ಇವುಗಳೆಲ್ಲವನ್ನೂ ಮೆಟ್ಟಿ ನಿಂತು, ಲೋಚನವು ಅಂದಂದಿನ ವಿದ್ವತ್ತು–ಸಂಶೋಧನೆಗಳ ಮುಖವಾಣಿಯಾಗಿ ಹೊರ ಹೊಮ್ಮುತ್ತಿದೆ ಎಂದು ಹೇಳಿದರು. ಈ ದಿನ ಬಿಡುಗಡೆಯಾಗಿರುವ "ಲೋಚನ ದೀಪ್ತಿ" ಹೊತ್ತಿಗೆಯು, ಸಾಹಿತ್ಯ, ಇತಿಹಾಸ, ಶಾಸನಕ್ಕೆ ಸಂಬಂಧಿಸಿದ ಸಂಶೋಧನೆ ಮತ್ತು ವಿಮರ್ಶಾ ಲೇಖನಗಳ ಸಂಪುಟ. ಇದೊಂದು ಉತ್ತಮ ಆಕರ ಮತ್ತು ಪರಾಮರ್ಶನ ಗ್ರಂಥವೆನಿಸುವುದರಲ್ಲಿ ಯಾವ ಸಂದೇಹವಿಲ್ಲವೆಂದು ಹೇಳಿದರು.

**ಡಾ.ಎನ್. ಆರ್.ಲಲಿತಾಂಬ** ಸಹ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ವಿಜಯನಗರ, ಬೆಂಗಳೂರು

**ವಿಷಯ : " ಬಿ.ಎಂ.ಶ್ರೀ. ಪ್ರತಿಷ್ಠಾನ ಮತ್ತು ಹಳಗನ್ನಡ ಚಟುವಟಿಕೆಗಳು ಸಂಶೋಧನೆ"**

ಪ್ರತಿಷ್ಠಾನವು ಹಳಗನ್ನಡ ಕಾವ್ಯಗಳ ಓದು, ಅರ್ಥೈಸುವಿಕೆ, ಗ್ರಹಿಕೆ, ಬೋಧನೆ, ಅಧ್ಯಯನಗಳ ಅನುಕೂಲಕ್ಕಾಗಿ – ೩ನೇಪುಟಕ್ಕೆ

# ಡಿಸೆಂಬರ್ ೨೦೨೧ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

ದಿನಾಂಕ : ೦೮ –೧೨–೨೦೨೧ ಬುಧವಾರ ಸಂಜೆ : ೪–೩೦ ಗಂಟೆಗೆ ಜಾಲತಾಣ (ಆನ್ಲೈನ್/ನೇರಪ್ರಸಾರ) ಕಾರ್ಯಕ್ರಮ
ವಿ.ಸೀ, ಶಾಂತಾ ಪ್ರಭುಶಂಕರ, ವೆಂಕಟರಂಗಪ್ಪ, ಚಂದ್ರಶೇಖರ ಶರ್ಮ,
ಟಿ.ಎನ್. ಮಹಾದೇವಯ್ಯ, ಜಿ.ಪಿ. ರಾಜರತ್ನಂ, ರಾಮಚಂದ್ರಪಟವಾರಿ, ಬಿ.ಎಂ.ಶ್ರೀ ದತ್ತಿ – ದತ್ತಿ ಕಾರ್ಯಕ್ರಮ

ವಿಷಯ : ಜೈನ ಮತ್ತು ಬೌದ್ಧ ಸಾಹಿತ್ಯಕ್ಕೆ ರಾಜರತ್ನಂ ಕೊಡುಗೆ

ಉಪನ್ಯಾಸಕರು : ಡಾ. ಹೆಚ್.ಎಸ್. ಗೋಪಾಲ ರಾವ್
ಖ್ಯಾತ ವಿಮರ್ಶಕರು

**೨ ನೇಪುಟಕ್ಕೆ**

ಪುನರ್ಮನನಕ್ಕೆ ಮತ್ತು ಅಭ್ಯಾಸ ತರಗತಿಗಳಂತೆ ನಡೆಯುವ ಸಣ್ಣ ಅವಧಿಯ ಶಿಬಿರಗಳನ್ನು ೨೦೦೦ರಿಂದ ಪ್ರಾಯೋಗಿಕವಾಗಿ ಪ್ರಾರಂಭಿಸಿತು. ಈ ಶಿಬಿರಗಳಿಗೆ ಉತ್ತಮ ಪ್ರತಿಕ್ರಿಯೆ ಬಂದು, ಆರು ತಿಂಗಳುಗಳ ತರಗತಿಗಳನ್ನು ಮತ್ತು ಹತ್ತು ತಿಂಗಳುಗಳ ತರಗತಿಗಳನ್ನು ನಡೆಸಿಕೊಂಡು ಬರುತ್ತಿದೆ. ಕನ್ನಡ ಬೋಧನೆ ಮಾಡುತ್ತಿರುವ ಉಪನ್ಯಾಸಕರು ಈ ಶಿಬಿರಗಳ ಪ್ರಯೋಜನ ಪಡೆದು ತಮ್ಮ ಭೋಧನ ಸಾಮರ್ಥ್ಯವನ್ನು ಹೆಚ್ಚಿಸಿಕೊಂಡಿದ್ದಾರೆ. ೨೦೧೯ರಿಂದ ಶಾಸನಗಳ ಪಾಠ ಕಲಿಕೆಯನ್ನೂ ಪಠ್ಯದಲ್ಲಿ ಸೇರಿಸಲಾಗಿದೆ.

ಪಂಪಭಾರತ, ಕುಮಾರವ್ಯಾಸ ಭಾರತ, ರನ್ನನ ಗಧಾಯುದ್ಧ ಹರಿಹರನ ರಗಳೆ, ಸೋಮೇಶ್ವರ ಶತಕ, ನಳ ಚಂಪೂ, ಮುಂತಾದ ಕಾವ್ಯಗಳ ಆಯ್ದ ಭಾಗವನ್ನು ಪಠ್ಯವಾಗಿ ವಿದ್ಯಾರ್ಥಿಗಳಿಗೆ ನೀಡಲಾಗುತ್ತದೆ. ಇಡೀ ಕರ್ನಾಟಕದಲ್ಲಿ, ಪ್ರತಿಷ್ಠಾನವು ಹಳಗನ್ನಡ ಬೋಧನೆ ಮಾಡುತ್ತಿರುವ ಏಕೈಕ ಸಂಸ್ಥೆಯಾಗಿದೆ. ಅಲಂಕಾರ, ಛಂದಸ್ಸು, ವ್ಯಾಕರಣದ ಅಂಶಗಳನ್ನೂ ಪಠ್ಯ ಒಳಗೊಂಡಿದೆ. ನಿವೃತ್ತ ಅಧಿಕಾರಿಗಳು, ಇಂಜನಿಯರ್‌ಗಳು, ಗೃಹಿಣಿಯರು ಈ ಶಿಬಿರಗಳ ಪ್ರಯೋಜನ ಪಡೆಯುತ್ತಿದ್ದಾರೆ.

ನುರಿತ ವಿದ್ವಾಂಸರು ತಮ್ಮ ಸ್ವ ಆಸಕ್ತಿಯಿಂದ ಈ ಶಿಬಿರಗಳಲ್ಲಿ ಬೋಧನೆ ಮಾಡುತ್ತಾ ಮತ್ತು ಮಾರ್ಗದರ್ಶಕರಾಗಿ ಸೇವೆ ಸಲ್ಲಿಸುತ್ತಿದ್ದು, ಅವರಿಗೆಲ್ಲರಿಗೂ,ಈ ವಿಚಾರ ಸಂಕಿರಣದ ಮೂಲಕ ತಾವು ಕೃತಜ್ಞತೆಗಳನ್ನು ಸಲ್ಲಿಸುತ್ತಿರುವುದಾಗಿ ಡಾ.ಎನ್.ಆರ್. ಲಲಿತಾಂಬ ಅವರು ತಿಳಿಸಿದರು.

**ಶ್ರೀ ಬಿ.ಎಸ್. ಗುರುಪ್ರಸಾದ್ : ಹಸ್ತಪ್ರತಿ ಸಂಯೋಜಕರು**

**ವಿಷಯ : ಬಿ.ಎಂ.ಶ್ರೀ ಪ್ರತಿಷ್ಠಾನದ ಹಸ್ತಪ್ರತಿ ಸಂಗ್ರಹಾಲಯದಲ್ಲಿರುವ ಹಸ್ತಪ್ರತಿಗಳು : ಒಂದು ಅವಲೋಕನ**

ಬಿ.ಎಂ.ಶ್ರೀ ಪ್ರತಿಷ್ಠಾನದ ಸಂಸ್ಥಾಪಕರಾದ ಪ್ರೊ. ಎಂ.ವಿ.ಸೀ. ಅವರು ದಾಸ ಸಾಹಿತ್ಯ ಪರಂಪರೆ ಹಿನ್ನೆಲೆಯಿಂದ ಬಂದವರು. ಪ್ರತಿಷ್ಠಾನದ ಹಸ್ತಪ್ರತಿ ಸಂಗ್ರಹಾಲಯವು ಅವರ ಪೂರ್ವಿಕರ ಬಳಿಯಿದ್ದ ಪ್ರಾಚೀನ ತಾಳೆವೋಲೆ ಹಾಗೂ ಕಾಗದ ಹಸ್ತಪ್ರತಿಗಳ ಸಂಗ್ರಹದಿಂದಲೇ ಆರಂಭವಾಯಿತು.

ಈ ಸಂಗ್ರಹಾಲಯದಲ್ಲಿ ಶ್ರೀ ತಾಳೆ ಮತ್ತು ತಾಳೆ ಗರಿಗಳೆಂಬ ಎರಡೂ ವಿಧದ ತಾಳೆಗರಿ ಗ್ರಂಥಗಳಿವೆ. ಅದಲ್ಲದೆ ಕಡತಗಳು, ಕಲ್ಲಚ್ಚಿನ ಪ್ರತಿಗಳು, ಸಾಂಚಿ ಪತ್ರದ ಮಾದರಿ, ಭೂರ್ಜ ಪತ್ರದ ಮಾದರಿ ಉದ್ಧರಣ ಪಟಲ ಬಟ್ಟೆ ಮೇಲೆ ಬರೆದ ನಿರೂಪ, ಕೋರಿಕಾಗದದಲ್ಲಿ ಬರೆದಿರುವ ದಾನಪತ್ರ, ಅಲಂಕೃತ ರಾಮಾಯಣದ ಕೈಬರಹದ ಗ್ರಂಥಗಳು, ಹಲವು ವಿದ್ವಾಂಸರ ಕೈಬರಹದ ಕೃತಿಗಳು, ಅಲಂಕೃತ ಪ್ರೇಕ್ಷಣೀಯ ಹಸ್ತಪ್ರತಿಗಳು, ಕನ್ನಡ ಲಿಪಿಯ ಉಗಮ, ಬೆಳವಣಿಗೆ ಮತ್ತು ವಿಕಾಸಗಳನ್ನು ಬಿಂಬಿಸುವ ಪಟಗಳು ತಿಗಳಾರಿ, ಗ್ರಂಥಲಿಪಿ, ತೆಲುಗು ಮತ್ತು ನಂದಿನಾಗರಿ ಲಿಪಿಗಳ ಪಟಗಳು (charts) ತಾಳೆಗರಿಯನ್ನು ಕೊರೆಯುವ ಸಾಧನೆಗಳಾದ ವೈವಿಧ್ಯಮಯ ಕಂಠಗಳ ಸಂಗ್ರಹಗಳ ಬಗ್ಗೆ ವಿವರಣೆ ನೀಡಿದರು.

ಪ್ರತಿಷ್ಠಾನದಲ್ಲಿ ಒಟ್ಟು ೧೨೧೮ ಹಸ್ತಪ್ರತಿಗಳಿದ್ದು, ಅವುಗಳ ವಿವರ

| | |
|---|---|
| ೧. ಓಲೆಗರಿಯ ಹಸ್ತಪ್ರತಿಗಳು | – ೫೬೦ |
| ೨. ಕಾಗದದ ಹಸ್ತಪ್ರತಿಗಳು | – ೩೯೦ |
| ೩. ಕಲ್ಲಚ್ಚಿನ ಪ್ರತಿಗಳು | – ೨೮ |
| ೪. ಕಡತಗಳು | – ೫ |
| ೫. ಅಸಮಗ್ರ ತುಟಿತ ಗ್ರಂಥಗಳು | – ೧೫೬ |
| ೬. ಭಾರತದ ವಿವಿಧ ಲಿಪಿಗಳ ಸುಂದರ ಬರವಣಿಗೆಯ (caligraphy sheets )ಗಳು | – ೭೯ |
| ಒಟ್ಟು | ೧೨೧೮ |

**ಲಿಪಿ/ಭಾಷಾವಾರು ಹಸ್ತ ಪ್ರತಿಗಳ ವಿವರ**

| | |
|---|---|
| ೧.ಕನ್ನಡ ಭಾಷೆಯ ಮತ್ತು ಕನ್ನಡ ಲಿಪಿಯ ಹಸ್ತಪ್ರತಿಗಳು | – ೬೦೧ |
| ೨.ಸಂಸ್ಕೃತ ಭಾಷೆ / ದೇವನಾಗರಿ ಲಿಪಿಯ ಹಸ್ತಪ್ರತಿಗಳು | – ೮೦ |
| ೩.ಸಂಸ್ಕೃತ ಭಾಷೆ/ ನಂದಿನಾಗರಿ ಲಿಪಿಯ ಹಸ್ತಪ್ರತಿಗಳು | – ೧೨೦ |
| ೪.ಸಂಸ್ಕೃತ ಭಾಷೆ/ ತೆಲುಗು ಲಿಪಿಯ ಹಸ್ತಪ್ರತಿಗಳು | – ೨೬ |
| ೫.ಸಂಸ್ಕೃತ ಭಾಷೆ /ಗ್ರಂಥ ಲಿಪಿಯ ಲಿಪಿಯ ಹಸ್ತಪ್ರತಿಗಳು | – ೩೦ |
| ೬.ಸಂಸ್ಕೃತ ಭಾಷೆ/ ತಿಗಳಾರಿ ಲಿಪಿಯ ಹಸ್ತಪ್ರತಿಗಳು | – ೬೩ |
| ೭.ಕನ್ನಡ/ ಭಾಷೆ ಲಿಪಿ ಸಂಸ್ಕೃತ ಹಸ್ತಪ್ರತಿಗಳು | – ೨ |
| ೮.ತೆಲುಗು ಭಾಷೆ /ಲಿಪಿ ತೆಲುಗು ಹಸ್ತಪ್ರತಿಗಳು | – ೧೬ |
| ೯.ಸಂಸ್ಕೃತ ಭಾಷೆ / ಕನ್ನಡ ಲಿಪಿ | –೨೮೦ |
| ಒಟ್ಟು | ೧೨೧೮ |

ಸಂಸ್ಕೃತ ಹಸ್ತಪ್ರತಿಗಳಲ್ಲಿ ಕೆಲವು ಪುರಾಣಗಳು ವೇದ ಸೂಕ್ತಗಳು, ಬ್ರಾಹ್ಮಣ್ಯಕಗಳು, ಅರಣ್ಯಕಗಳು, ಉಪನಿಷತ್ತು, ಸ್ಮೃತಿ ಸಂಗ್ರಹಗಳು ಉಪಾಖ್ಯಾನಗಳು, ಸ್ತೋತ್ರ ಸಂಗ್ರಹಗಳ ಮತ್ತು ವಾಸ್ತು ಗ್ರಂಥಗಳ ಮಾಹಿತಿಯನ್ನು ನೀಡಿದರು.

ಕನ್ನಡ ಹಸ್ತಪ್ರತಿಗಳಲ್ಲಿ ಲಭ್ಯವಿರುವ ಕೆಲವು ಕಾವ್ಯಗಳ, ವೈದ್ಯ ಗ್ರಂಥಗಳ, ಚರಿತ್ರೆಗಳ ಕಥಾ ಪ್ರಸಂಗಗಳ, ಯಕ್ಷಗಾನಗಳ, ಮೈಸೂರು ಅರಸರ ಕಾಲದ ಕೆಲವು ಮಹಾಭಾರತ ಪರ್ವಗಳ ಮೇಲಿನ ಟೀಕುಗಳ ಮಾಹಿತಿ ನೀಡಿದರು.

ಹಸ್ತಪ್ರತಿಗೆ ಸಂಬಂಧಿಸಿದಂತೆ ಇದುವರೆಗೆ ಪ್ರತಿಷ್ಠಾನ ನಡೆಸಿರುವ ಸಮಾವೇಶಗಳ ಮತ್ತು ಪ್ರತಿಷ್ಠಾನದ ಪ್ರಕಟಣೆಗಳ ಮಾಹಿತಿ ನೀಡಿದರು.

*

# ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ನಡೆದ ಕಾರ್ಯಕ್ರಮಗಳ ವರದಿ

೨೪-೧೦-೨೦೨೧

**ಬೇಟೆರಾಯ ದೀಕ್ಷಿತ್, ಬಿ.ರಾಮಸ್ವಾಮಿ, ಎಸ್. ಶ್ರೀಕಂಠಯ್ಯ, ಶ್ರೀಮತಿ ಸಾವಿತ್ರಮ್ಮರಾಮಸ್ವಾಮಿ ದತ್ತಿ ಕಾರ್ಯಕ್ರಮ**

ಶ್ರೀ ಬೇಟೆರಾಯ ದೀಕ್ಷಿತ್, ಪ್ರೊ. ಬಿ. ರಾಮಸ್ವಾಮಿ, ಎಸ್, ಶ್ರೀಕಂಠಯ್ಯ ಹಾಗೂ ಶ್ರೀಮತಿ ಎಚ್.ವಿ. ಸಾವಿತ್ರಮ್ಮ ರಾಮಸ್ವಾಮಿ ದತ್ತಿ ಯಡಿಯಲ್ಲಿ ವಿಜ್ಞಾನ ಗೋಷ್ಠಿ ಅಂಗವಾಗಿ ಜರುಗಿದ ಈ ಅಂತರ್ ಜಾಲಗೋಷ್ಠಿಯಲ್ಲಿ "ಆಂಗ್ಲ ಭಾಷಾನುವಾದ ಮತ್ತು ಗಣಿತದ ವಿಶ್ಲೇಷಣೆಯೊಡನೆ" ಕೃತಿಯ ಕರ್ತೃ ಜಾವಗಲ್ ಸೀತಾರಾಮ, ಡಾ.ಬಿ.ಎಸ್.ಶೈಲಜಾ ಹಾಗೂ ಖ್ಯಾತ ವಿಜ್ಞಾನ ಬರಹಗಾರ ಪ್ರೊ.ಪಾಲಚಂದ್ರ ರಾವ್ ಪಾಲ್ಗೊಂಡು ತಮ್ಮ ವಿಚಾರಗಳನ್ನು ಮಂಡಿಸಿ, ೧೬ನೇ ಶತಮಾನದಲ್ಲಿ ರಚಿತವಾದ ಗಣಿತಗನ್ನಡಿ ಕೃತಿಯ ಕುರಿತು ಸಂಶೋಧನೆಗಳು ನಡೆಯಬೇಕು ಎಂದು ಅಭಿಪ್ರಾಯಪಟ್ಟರು.

'ಗಣಿತಗನ್ನಡಿ' ಎಂಬ ಕನ್ನಡದ ಖಗೋಳ ಶಾಖೆಯ ಮಹತ್ವದ ಗ್ರಂಥವನ್ನು ಕುರಿತು ಈ ವಿಚಾರಗೋಷ್ಠಿಯಲ್ಲಿ ಪಾಲ್ಗೊಂಡ ವಿದ್ವಾಂಸರು ಖಗೋಳಶಾಸ್ತ್ರ ಕುರಿತು ಅತ್ಯಂತ ಖಚಿತವಾದ, ನಿಖರವಾದ ವೈಜ್ಞಾನಿಕ ಮಾಹಿತಿಗಳನ್ನು ಒಳಗೊಂಡ ಹಾಗೂ ತಾಳೆಗರಿಯಲ್ಲಿ ದಾಖಲಾಗಿರುವ 'ಗಣಿತ ಗನ್ನಡಿ' ಕುರಿತಂತೆ ಸಂಶೋಧನೆ ಅಗತ್ಯವಿದೆ ಎಂದು ವಿಜ್ಞಾನ -ಸಾಹಿತ್ಯಾಸಕ್ತರು ಒಮ್ಮತದೊಂದಿಗೆ ಅಭಿಪ್ರಾಯ ವ್ಯಕ್ತಪಡಿಸಿದರು.ಈ ರೀತಿಯ ವಿಚಾರಗಳನ್ನು ಆಗ್ರಹಿಸಿ, ಖಗೋಳಶಾಸ್ತ್ರ ಸಂಶೋಧನಾ ವಲಯದ ಗಮನ ಸೆಳೆದರು.

ಜ್ಯೋತಿಷ್ಯ ಸುಳ್ಳು ಎಂದು ಹೇಳಲಾಗುತ್ತದೆ. ಆದರೆ, ಖಗೋಳದ ಸಿದ್ಧಾಂತಗಳೊಂದಿಗೆ ಜ್ಯೋತಿಷ್ಯ ಶಾಸ್ತ್ರವನ್ನು ಬಲಪಡಿಸಬಹುದು ಎಂಬುದಕ್ಕೆ ಗಣಿತಗನ್ನಡಿಯಲ್ಲಿ ಸಾಕ್ಷ್ಯಾಧಾರಗಳಿವೆ. ತಾಳೆಗರಿಯಲ್ಲಿರುವ ಗಣಿತಗನ್ನಡಿಯ ಕ್ಲಿಷ್ಟವಾದ ವಿಷಯಗಳನ್ನು ಸರಳೀಕರಿಸಲು ಸಾಧ್ಯವಾದರೆ, ಖಗೋಳಶಾಸ್ತ್ರದಲ್ಲಿ ರಹಸ್ಯವಾಗಿರುವ ಎಷ್ಟೋ ಸಂಗತಿಗಳು ಬೆಳಕು ಕಾಣಬಹುದು. ಆದ್ದರಿಂದ, ಖಗೋಳ ವಿಜ್ಞಾನಿಗಳು ಇತ್ತ ಗಮನ ಹರಿಸಬೇಕು ಎಂದು ಆಶಿಸಿದರು.

ಪ್ರತಿಷ್ಠಾನದ ಮಾಜಿ ಅಧ್ಯಕ್ಷ ಡಾ.ಆರ್.ಲಕ್ಷ್ಮೀನಾರಾಯಣ ಸೇರಿದಂತೆ ವಿದ್ವಾಂಸರು ಹಾಗೂ ವಿಜ್ಞಾನ ಸಾಹಿತ್ಯಾಸಕ್ತರು ಪಾಲ್ಗೊಂಡಿದ್ದರು. ಡಾ ಬೈರಮಂಗಲ ರಾಮೇಗೌಡರು ಪ್ರಾಸ್ತಾವಿಕವಾಗಿ ಮಾತನಾಡಿ, ಸ್ವಾಗತಿಸಿದರು. ಡಾ.ಬಿ.ಸಿ.ರಾಜಕುಮಾರ್ ಅವರು ಕಾರ್ಯಕ್ರಮ ಸಂಯೋಜನೆಯೊಂದಿಗೆ ನಿರೂಪಣೆ ಮಾಡಿದರು.

೧೨-೧೧-೨೦೨೧

**ಶ್ರೀಮತಿ ಬಿ.ಜಿಕುಸುಮಾ ಸಾಮಾಜಿಕ ಸೇವಾ ಟ್ರಸ್ಟ್ (ರಿ) ದತ್ತಿ ಕಾರ್ಯಕ್ರಮ**

## ಸರ್.ಸಿ.ವಿ. ರಾಮನ್ ಸ್ಮಾರಕ ವಿಜ್ಞಾನ ಉಪನ್ಯಾಸ

## ವಿಷಯ : ಸಿ.ವಿ. ರಾಮನ್ ಆವಿಷ್ಕಾರ ಮತ್ತು ವಿಶೇಷ ವ್ಯಕ್ತಿತ್ವ

ಸಂಪನ್ಮೂಲ ವ್ಯಕ್ತಿ : ಡಾ. ಎ.ಎಸ್. ಗೋವಿಂದ್

ಮುಖ್ಯಸ್ಥರು ಭೌತಶಾಸ್ತ್ರ ವಿಭಾಗ, ವಿಜಯಾ ಕಾಲೇಜು, ಆರ್.ವಿ.ರಸ್ತೆ, ಬೆಂಗಳೂರು




ಈ ಕಾರ್ಯಕ್ರಮದ ದತ್ತಿಯಡಿಯಲ್ಲಿ ಸರ್.ಸಿ.ವಿ.ರಾಮನ್ ಆವಿಷ್ಕಾರ ಮತ್ತು ವಿಶೇಷ ವ್ಯಕ್ತಿತ್ವ ವಿಷಯವನ್ನು ಕುರಿತು ವಿಜಯ ಕಾಲೇಜಿನ ಭೌತಶಾಸ್ತ್ರ ವಿಭಾಗದ ಮುಖ್ಯಸ್ಥರಾದ ಡಾ.ಎ.ಎಸ್.ಗೋವಿಂದ್ ಅವರು ಉಪನ್ಯಾಸ ನೀಡಿದರು.

ಸರ್ ಸಿ.ವಿ.ರಾಮನ್ ಅವರ ಜೀವನ, ವ್ಯಕ್ತಿತ್ವ, ಶಿಕ್ಷಣ, ಸಾಮಾಜಿಕ ಸೇವೆ ಮತ್ತು ಸಿ.ವಿ.ರಾಮನ್ ಅವರಿಗೆ ನೊಬೆಲ್ ಪಾರಿತೋಷಕವನ್ನು ತಂದುಕೊಟ್ಟ ರಾಮನ್ ಪರಿಣಾಮವನ್ನು ಕುರಿತು ಸಾಮಾನ್ಯರಿಗೂ ಅರ್ಥವಾಗುವಂತೆ ಸರಳವಾಗಿ ತಿಳಿಸಿಕೊಟ್ಟರು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದ ಡಾ.ಬೈರಮಂಗಲ ರಾಮೇಗೌಡರು ಅವರು ಪ್ರಾಸ್ತಾವಿಕವಾಗಿ ದತ್ತಿ ನಿಧಿ ಸ್ಥಾಪಿಸಿರುವ ಶ್ರೀಮತಿ ಬಿ.ಜಿ.ಕುಸುಮ ಅವರ ವಿಜ್ಞಾನದ ಬಗೆಗಿನ ಆಸಕ್ತಿ ಮತ್ತು ಉತ್ಸಾಹವನ್ನು ಸ್ಮರಿಸಿದರು. ಸಿ.ವಿ.ರಾಮನ್ ಅವರ ಸಾಧನೆಗಳನ್ನು ಸೂಚ್ಯವಾಗಿ ವಿವರಿಸಿದರು. ಡಾ.ಬಿ.ಸಿ.ರಾಜಕುಮಾರ್ ಅವರು ಸಂಪನ್ಮೂಲ ವ್ಯಕ್ತಿಗಳು ಮತ್ತು ಗೂಗಲ್ ಜಾಲದ ಮೂಲಕ ಭಾಗವಹಿಸಿದ್ದವರನ್ನು ಸ್ವಾಗತಿಸಿ ವಂದನಾರ್ಪಣೆ ಮಾಡಿದರು. ಜಾಲಗೋಷ್ಠಿ ನಿರ್ವಹಿಸಿದರು.



**ಶ್ರೀಮತಿ ಬಿ.ಜಿ.ಕುಸುಮಾ**

ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ನಿವೃತ್ತ ಶಿಕ್ಷಕಿ ಬಿ.ಜಿ.ಕುಸುಮಾ ಅವರು ಸರ್.ಸಿ.ವಿ. ರಾಮನ್ ಸ್ಮಾರಕ ವಿಜ್ಞಾನ ಉಪನ್ಯಾಸ ದತ್ತಿ ಮತ್ತು ದಿವಂಗತ ಬಿ.ಎಸ್. ಗೋಪಾಲರಾವ್ ಮತ್ತು ಶ್ರೀಮತಿ ವೇದವತಿಬಾಯಿ ಗಮಕ ಕಾರ್ಯಕ್ರಮ ದತ್ತಿ ಎಂಬ ಎರಡು ಪ್ರತ್ಯೇಕ ದತ್ತಿಗಳನ್ನು ಸ್ಥಾಪಿಸಿರುತ್ತಾರೆ.



# ಪದಚರಿತೆ



**ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ**

– ಡಾ. ಪಿ.ವಿ. ನಾರಾಯಣ

**ಮದ್ದು:** ಕನ್ನಡದಲ್ಲಿ ಈ ಶಬ್ದಕ್ಕೆ ಔಷಧಿ ಎಂಬ ಅರ್ಥವಿದೆ. ಇದು ದ್ರಾವಿಡ ಪದ [ಕನ್ನಡ, ತಮಿಳು, ತೆಲುಗು, ಮಲಯಾಳಂ ಮತ್ತು ತುಳು ಮುಖ್ಯವಾದ ದ್ರಾವಿಡ ಭಾಷಾ ಕುಟುಂಬದಲ್ಲಿರುವ ಪದ]. ಇದರ ಮೂಲ ರೂಪ ಕನ್ನಡದಲ್ಲಿ ಮರ್ದು ಎಂದು. ತಮಿಳಿನಲ್ಲಿ ಮರುಂದು, ತೆಲುಗಿನಲ್ಲಿ ಮಂದು, ಮಲಯಾಳಂನಲ್ಲಿ ಮರುನ್ನು, ತುಳುವಿನಲ್ಲಿ ಮರ್ದ್ ಎಂಬ ರೂಪಗಳಿವೆ. ತುಂಬ ಹಿಂದಿನ ಕನ್ನಡ ಕಾವ್ಯಗಳಲ್ಲಿಯೂ ಔಷಧಿ ಎಂಬ ಅರ್ಥದಲ್ಲಿ ಈ ಶಬ್ದದ ಪ್ರಯೋಗವಿದೆ. "ಮರ್ದುಂ ಮಂತ್ರಮುಂ" ಎಂಬ ಪ್ರಯೋಗ ಎಂದು 'ವಡ್ಡಾರಾಧನೆ'ಯಲ್ಲಿದ್ದರೆ, ಚಿಕಿತ್ಸೆಯ ಎರಡು ಕ್ರಮಗಳಾದ ಔಷಧಪ್ರಯೋಗ ಮತ್ತು ಮಂತ್ರ ಹಾಕುವುದು ಇವುಗಳನ್ನಿದು ಸೂಚಿಸುತ್ತದೆ. "ಕುತ್ತಕ್ಕೆ ಮರ್ದು ಮಾಡದೆ ಕುತ್ತಂ ಪೋಗೆಂದೊಡಂತೆ ಪೋಕುಮೇ" ಎಂದು ಬ್ರಹ್ಮಶಿವನ 'ಸಮಯ ಪರೀಕ್ಷೆ' ಯಲ್ಲಿ ಹೇಳಿದೆ. ಮದ್ದು ರೋಗನಿವಾರಣೆಗಾಗಿ ಬಳಸುವ ವಸ್ತು ಎಂಬುದು ಸ್ಪಷ್ಟವಾದ ಅರ್ಥ.

ಮರ್ದು ಎಂಬ ಶಬ್ದವನ್ನು ವಿಷ, ನಂಜು ಎಂಬರ್ಥದಲ್ಲಿಯೂ ಬಳಸುತ್ತಿದ್ದರು. 'ಸಮಯಪರೀಕ್ಷೆ'ಯಲ್ಲಿಯೇ "ಮಕ್ಕಳಿಗೆ ಬೆಣ್ಣೆಯೊಳ್ ಮರ್ದಿಕ್ಕುವವೊಲ್" ಎಂದು ಹೇಳಿದೆ. ಕೈಮದ್ದು ಎಂದೂ ಇದನ್ನು ಕರೆಯುತ್ತಾರೆ. ಕೈಮಸಕ ಅಥವಾ ಕೈಮಸಕು ಎಂಬ ಶಬ್ದಗಳನ್ನೂ ಈ ಅರ್ಥದಲ್ಲಿ ಬಳಸುತ್ತಾರೆ. ಆರೋಗ್ಯ ಹಾಳು ಮಾಡಲು ಆಹಾರದೊಡನೆ ಬೆರೆಸುವ ಮದ್ದನ್ನಿದು ಸೂಚಿಸುತ್ತದೆ. ಮಸಕ ಎಂದರೆ ಕೆಲಸ ಎಂಬ ಅರ್ಥವೂ ಇರುವುದರಿಂದ, ಕೈಮಸಕ ಎಂದರೆ ಕೈಚಳಕ ಎಂಬ ಅರ್ಥವೂ ಆಗಬಹುದೇನೋ. ಏಕೆಂದರೆ ಇದು ಬಹಿರಂಗವಾಗಿ ಮಾಡುವಂಥ ಕಾರ್ಯವಲ್ಲವಲ್ಲ. ಅಪರಿಚಿತರು ಕೊಡುವ ಏನನ್ನೂ ತಿನ್ನಬೇಡ ಎಂದು ಚಿಕ್ಕ ವಯಸ್ಸಿನಲ್ಲಿ ಹಳ್ಳಿಯಲ್ಲಿ ನಮ್ಮ ಹಿರಿಯರು ಹೇಳುತ್ತಿದ್ದರು. ಕೆಲವರಿಗೆ ಹೀಗೆ ಕೈಮಸಕವಿಕ್ಕುವುದು ಅನಿವಾರ್ಯ ಎಂಬ ನಂಬಿಕೆಯಿತ್ತು; ಯಾರಿಗಾದರೂ ಅದನ್ನು ಹಾಕಲೇಬೇಕಂತೆ; ಇಲ್ಲದಿದ್ದರೆ ಅವರಿಗೇ ಕೇಡು. ಆಹಾರದಲ್ಲಿ ಬೆರಸಿದ ಏನೋ ವಿಷಪದಾರ್ಥ ಹೊಟ್ಟೆಯಲ್ಲೇ ಉಳಿದು ತಿಂದವವನ್ನು ಕೃಶಗೊಳಿಸುತ್ತದೆ ಎಂಬ ನಂಬಿಕೆ. "ನವನೀತಮುಮಂ ಶುಕತುಂಡವುಮಂ ಮೇಣ್ ಬಿಸಿಯ ನೀರುಮಂ ಕೋಳದ ಮೂಳವುಮಂ ಮರವಸಲೆಯ ಪತ್ರೆ ತೊಳಸಿ ಸೇವಿಸುಗೆ ಪಿಂಗುಗುಂ ಕೆಯ್ಮಸಕಂ" ಎಂದು ಚಾವುಂಡರಾಯನ 'ಲೋಕೋಪಕಾರ'ದಲ್ಲಿ ಇಂಥ ವಿಷವನ್ನಿಳಿಸುವ ಉಪಾಯವು ಸೂಚಿತವಾಗಿದೆ. ಆನೆಗನ ತಿಗುಡನ್ನು ಅರೆದು ಬೆಣ್ಣೆಯಲ್ಲಿ ಕಲಸಿ ತಿನ್ನುವುದು, ಅಂಕೋಲೆಯ ಬೇರನ್ನು ಬಿಸಿನೀರಲ್ಲಿ ತೇಯ್ದು ಕುಡಿಸುವುದು ಅಥವಾ ಬಸಲೆಸೊಪ್ಪನ್ನು ತುಳಸಿಗಳನ್ನು ಮೆಲ್ಲವುದು ಇದಕ್ಕೆ ಪರಿಹಾರ ಎಂದು ಅರ್ಥ. ಇಲ್ಲಿ ಸೂಚಿತವಾದ ಸಸ್ಯಗಳನ್ನು ಗುರುತಿಸಲು ಸಾಮಾನ್ಯರಿಗೆ ಸಾಧ್ಯವಿಲ್ಲ.

======

**ಮರ:** ತಮಿಳು ಮಲಯಾಳಗಳಲ್ಲಿ 'ಮರಂ' ಎಂದೂ, ತೆಲುಗಿನಲ್ಲಿ ಮ್ರಾನು' 'ಎಂದೂ, ಕನ್ನಡ ತುಳುಗಳಲ್ಲಿ 'ಮರ' ಎಂದೂ ಇರುವ ಈ ಶಬ್ದವು ದೊಡ್ಡ ಗಿಡ ಎಂಬರ್ಥದಲ್ಲಿದೆ. "ಆಮೋದ ಕುಮುದಸಮಿತಿಯನಾ ಮರಗಳೊಳಾಯ್ದು ಕೊಯ್ದುಮಿಲ್ಲಿಗೆ ಬರ್ಪೆಂ" ಎಂಬುದು 'ಕವಿರಾಜಮಾರ್ಗ'ದಲ್ಲಿಯ ಸಾಲು. "ಕಜ್ಜಂ ಪಲಸಿನ ಮರದಂತೆ ಫಲಮನೆತ್ತಿಕೊಂಡು ಬರಲಕ್ಕುಂ" ಎಂಬುದು 'ಪಂಚತಂತ್ರ'ದ ವಾಕ್ಯ.

ಮರಗಳಿಂದ ಕೂಡಿದ ದಟ್ಟ ಕಾಡನ್ನು ಕುಮಾರವ್ಯಾಸ 'ಮರಗಾಡು' ಎನ್ನುತ್ತಾನೆ: "ಮರಗಾಡಿನಲಿ ಮೃಗಗಣದ ನೆಲೆಯಲಿ ಕಾಣಿರೆಲೆ ನೀವು" ಎಂಬುದು ಅವನ ಪ್ರಯೋಗ. 'ಮರಗಟ್ಟು' ಎಂದರೆ ಮರದ ಬುಡದ ಪಾತಿ: "ಮರಗಟ್ಟೆಂಬಂತೆ ಸುತ್ತುಂ ಮೊದಲೊಳ್ ಅಜಗರಂ .. .. ನೀಳ್ದಂತಿರೆ" – 'ಕರ್ನಾಟಕ ಕಾದಂಬರಿ'. 'ಮರಮೊದಲ್' ಎಂದರೆ ಮರದ ಬುಡ: "ಮುನೀಂದ್ರಂ ಬೇರೂಜಿದ ಬೀಳಲಂತೆ ಮರಮೊದಲಿರ್ದಂ" – 'ಚಂದ್ರಪ್ರಭಪುರಾಣ'. 'ಮರಗೊಂಬು' = ಮರದ ಕೊಂಬೆ: "ಮರಗೊಂಬಿನೊಳವುಂಕಿದ ಸೆಲ್ಲದ ಮುಷ್ಟಿ" –ಆಚಣ್ಣನ 'ವರ್ಧಮಾನಪುರಾಣ'. ಈ ಶಬ್ದಕ್ಕೆ ಮರಕೋತಿಯಾಟ ಎಂಬ ಅರ್ಥವೂ ಇದೆ: "ವಿನೋದರಸದ ಬಸದಿಂ ಮರಗೊಂಬನಾಡುತಿರ್ದ ವೀರಜಿನಕುಮಾರನಂ" ಎಂಬುದೂ ಅಲ್ಲಿಯದೇ ಪ್ರಯೋಗ. 'ಮರದುಱುಗಲ್' ಎಂದರೆ ತೋಪು: "ಪರ್ವತದ ಮೇಲೆ ಕಱಂಗಿ ಕಟ್ಟಿಲಿಸಿದ ಮರದುಱುಗಲ ನಡುವೆ" –'ಪಂಪಭಾರತ'. 'ಮರವಕ್ಕಿ' ಎಂದರೆ ಮರಕುಟಿಗ ಪಕ್ಷಿ: "ಕಾಗೆ ವಿಹಂಗ ಮಾರ್ಜಾಲ ಮರವಕ್ಕಿ ಗರ್ದಭ ಶಶಕ ಜಿಂಕೆಗಳು" ಎಂಬ ಸಾಲು ಏಲೇಶ್ವರ ಕೇತಯ್ಯನ ವಚನದ್ದು.

"ಮರ ಬೇರು ಸಾರದಿಂದ ನಾನಾ ಶಾಖೆಗಳು ಪಲ್ಲವಿಸುವ ತೆರನಂತೆ .. .. ಮರಕ್ಕೆ ಬೇರು ನಷ್ಟದಿಂದ ಶಾಖೆ ನಷ್ಟ" ಎಂಬ ಉಪಮೆ ಅಂಬಿಗರ ಚೌಡಯ್ಯನ ವಚನದಲ್ಲಿದೆ. ಬಸವಣ್ಣ "ಮರನೇರಿದ ಮರ್ಕಟನಂತೆ" ಎಂದು ಚಂಚಲ ಮನಸ್ಸನ್ನು ವರ್ಣಿಸುತ್ತಾನೆ. ಮತ್ತೊಂದೆಡೆ "ಮರಕ್ಕೆ ಬೇರು ಬಾಯೆಂದು ತಳಯಿಂಕೆ ನೀರನೆರೆದಡೆ ಮೇಲೆ ಪಲ್ಲವಿಸಿತ್ತು ನೋಡಾ" ಎಂದು ಜಂಗಮದ ಶ್ರೇಷ್ಠತೆಯನ್ನು ವರ್ಣಿಸುತ್ತಾನೆ.

"ಮರವನು ನುಂಗುವ ಪಕ್ಷಿ ಮನೆಯೊಳಗೆ ಬಂದಿದೆ" ಎಂದು ಕನಕದಾಸರು 'ಮರ'ವನ್ನು ಸಾಂಕೇತಿಕವಾಗಿ ಬಳಸಿಕೊಳ್ಳುತ್ತಾರೆ. "ಮರದ ಇಂಬಿಗೆ ಬಾಗಿ ಬಳುಕುತಿರುವೆಳಲತೆಯು ತಳಿರ ತೂಗುಯ್ಯಾಲೆ ಹೂ ತೊಂಗಲು" ಎಂಬುದು ವಿಸೀಯವರು ನೀಡುವ ಚಿತ್ರ. "ಬೇರು ಸತ್ತೀ ಮರವನೆತ್ತಿ ನಿಲ್ಲಿಸು ಮಗೂ, ಕೊಂಬೆರೆಂಬೆಗಳಿರಲಿ ಇದ್ದ ಹಾಗೆ" ಎಂಬ ಸಾಲು ದೇಶದ ಸ್ಥಿತಿ ವರ್ಣಿಸುವ ಗೋಪಾಲಕೃಷ್ಣ ಅಡಿಗರ 'ಇಂದು ನಮ್ಮೀ ನಾಡು – ೩' ಕವನದ್ದು.

=====

# ಬಿಎಂಶ್ರೀ ಪ್ರತಿಷ್ಠಾನ ನಡೆದು ಬಂದ ದಾರಿ–೩

ಬಿ.ಆರ್. ರವೀಂದ್ರನಾಥ

ಹಿಂದಿನ ಸಂಚಿಕೆಯಿಂದ

## ಪ್ರತಿಷ್ಠಾನವನ್ನು ಕಟ್ಟಿ ಬೆಳೆಸಿದ ಮಹನೀಯರು ೨
## ಡಾ. ಎಂ. ಎಂ. ಕಲಬುರ್ಗಿ

**ಡಾ. ಎಂ. ಎಂ. ಕಲಬುರ್ಗಿ (ಮಲ್ಲೇಶಪ್ಪ ಮಡಿವಾಳಪ್ಪ ಕಲಬುರ್ಗಿ)**ಯವರು ೧೯೩೮ ನವಂಬರ ೨೮ರಂದು ವಿಜಯಪುರ ಜಿಲ್ಲೆಯ ಸಿಂದಗಿ ತಾಲೂಕಿನ ಗುಬ್ಬೆವಾಡ ಗ್ರಾಮದಲ್ಲಿ ಜನಿಸಿದರು. ಇವರ ತಾಯಿ ಗುರಮ್ಮ; ತಂದೆ ಮಡಿವಾಳಪ್ಪ.



೧೯೬೨ರಲ್ಲಿ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಬೋಧಕರಾಗಿ ಸೇವೆ ಆರಂಭಿಸಿದ ಅವರು ೧೯೬೬ರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯದ ಅಧ್ಯಾಪಕರಾದರು ಹಂಪಿ ವಿಶ್ವವಿದ್ಯಾಲಯದ ಕುಲಪತಿಯಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದರು. ಸಾಹಿತ್ಯ , ಶಾಸನ, ಜಾನಪದ, ನಾಮ ವಿಜ್ಞಾನ, ಗ್ರಂಥ ಸಂಪಾದನೆ,ಹಸ್ತಪ್ರತಿಶಾಸ್ತ್ರ, ಮೊದಲಾದ ಕ್ಷೇತ್ರಗಳಲ್ಲಿ ಅಮೂಲ್ಯ ಕೊಡುಗೆಯನ್ನು ಕೊಟ್ಟಿದ್ದಾರೆ. ಕನ್ನಡ ಸಂಸ್ಕೃತಿ, ಇತಿಹಾಸ, ಸಾಹಿತ್ಯ, ಶಾಸನ, ಜಾನಪದ, ವ್ಯಾಕರಣ, ಹಸ್ತಪ್ರತಿ, ಗ್ರಂಥ ಸಂಪಾದನಾ ಶಾಸ್ತ್ರ ಸೇರಿದಂತೆ ಹಲವು ವಿಷಯಗಳಲ್ಲಿ ಅವರು ಹಲವಾರು ಸಂಶೋಧನೆಗಳನ್ನು ಮಾಡಿದ್ದರು. ಗದಗದಲ್ಲಿ ಶ್ರೀ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆಯ ಸಂಸ್ಥಾಪಕರು. ಕಲಬುರ್ಗಿಯವರು, ಕರ್ನಾಟಕದ ಬಹು ಪ್ರಸಿದ್ಧ ವಿದ್ವಾಂಸರಲ್ಲಿ ಒಬ್ಬರು.

* ಅವರ ಅಧ್ಯಯನ ಮತ್ತು ಕೊಡುಗೆಗಳು, ಶಾಸನಶಾಸ್ತ್ರ, ಸಾಹಿತ್ಯ ಚರಿತ್ರೆ, ಛಂದಸ್ಸು, ಇತಿಹಾಸ, ವಾಸ್ತುಶಿಲ್ಪ, ಗ್ರಂಥಸಂಪಾದನೆ, ಹಸ್ತಪ್ರತಿಶಾಸ್ತ್ರ, ಜಾನಪದ, ಸ್ಥಳನಾಮಗಳ ಅಧ್ಯಯನ, ಸಾಹಿತ್ಯ ವಿಮರ್ಶೆ ಮುಂತಾದ ಹತ್ತು ಹಲವು ಕ್ಷೇತ್ರಗಳಲ್ಲಿ ಹರಡಿಕೊಂಡಿವೆ. ಇವೆಲ್ಲದರ ಹಿನ್ನೆಲೆಯಲ್ಲಿ ಸಾಂಸ್ಕೃತಿಕ ಅಧ್ಯಯನದ ವಿಶಾಲವಾದ ಪರಿಪ್ರೇಕ್ಷ್ಯವಿದೆ. ಕಲಬುರ್ಗಿಯವರು ಎರಡು ನಾಟಕಗಳು ಮತ್ತು ಒಂದು ಕವನ ಸಂಕಲವನ್ನು ಪ್ರಕಟಿಸಿದ್ದಾರೆ.
* ೧೯೯೮–೨೦೦೧ರ ಕಾಲಾವಧಿಯಲ್ಲಿ ಕಲಬುರ್ಗಿಯವರು ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಉಪ ಕುಲಪತಿಗಳಾಗಿದ್ದರು. ಅಲ್ಲಿ ಅನೇಕ ಮಹತ್ವದ ಯೋಜನೆಗಳನ್ನು ಆಗುಮಾಡಿದ ಕಲಬುರ್ಗಿಯವರು ನಿವೃತ್ತಿಯ ನಂತರವೂ ಸಂಶೋಧನಾ ಚಟುವಟಿಕೆಗಳಲ್ಲಿ ಮಗ್ನರಾಗಿದ್ದಾರು. ಕರ್ನಾಟಕ ಸರ್ಕಾರವು ಪ್ರಕಟಿಸಿದ ಹದಿನೈದು ಸಂಪುಟಗಳ 'ವಚನ ಸಾಹಿತ್ಯ ಸಂಪುಟಮಾಲೆಗೆ ಅವರು ಪ್ರಧಾನ ಸಂಪಾದಕರಾಗಿದ್ದರು.

ಕಳೆದ ನಾಲ್ಕು ದಶಕಗಳಿಗೂ ಹೆಚ್ಚು ಕಾಲದಿಂದ ಸಂಶೋಧನೆಯು ಕಲಬುರ್ಗಿಯವರ ಪ್ರಧಾನ ಆಸಕ್ತಿಯಾಗಿದೆ. ಡಾ। ಎಂ.ಎಂ. ಕಲಬುರ್ಗಿಯವರು ಅವರು ಎಪ್ಪತ್ತೈದಕ್ಕೂ ಹೆಚ್ಚು ಪುಸ್ತಕಗಳನ್ನೂ, ನಾನೂರಕ್ಕೂ ಹೆಚ್ಚು ಸಂಶೋಧನಾ ಲೇಖನಗಳನ್ನೂ ಪ್ರಕಟಿಸಿದ್ದಾರೆ. ಈ ಬರವಣಿಗೆಯ ವ್ಯಾಪ್ತಿ ಮತ್ತು ಆಳಗಳು ಗಮನೀಯವಾಗಿವೆ. ಕರ್ನಾಟಕದ ಸಂಸ್ಕೃತಿಯನ್ನು ಕುರಿತ ಅನೇಕ ಸಂಶೋಧನಾ ಲೇಖನಗಳನ್ನು ಒಳಗೊಂಡಿವೆ. ತನ್ನ ಸಂಶೋಧನೆಯ ಫಲಿತಗಳ ನಿಕರತೆಯ ಬಗ್ಗೆ ನಂಬಿಕೆಯಿದ್ದಾಗ, ಅವರು ವಿವಾದಗಳನ್ನು ಹುಟ್ಟುಹಾಕಲು ಎಂದಿಗೂ ಹಿಂಜರಿದಿಲ್ಲ. ಅವರು ತಮ್ಮ ಆಕರಗಳನ್ನು ಖಚಿತಪಡಿಸಿಕೊಂಡಿರುತ್ತಾರೆ ಮತ್ತು ಮಹತ್ವದ ಒಳನೋಟಗಳನ್ನು ನೀಡುತ್ತಾರೆ. ಆಕರಗಳ ಶೋಧನೆಯಲ್ಲಿ ಹಲವು ದೇಶಗಳನ್ನು ಸುತ್ತಿರುವ ಕಲಬರ್ಗಿಯವರು ಅವುಗಳನ್ನು ವಿವೇಚನೆಯಿಂದ ಬಳಸಿಕೊಂಡಿದ್ದಾರೆ.

ಕನ್ನಡ ವಿಶ್ವವಿದ್ಯಾಲಯದ ಮೂಲಕ (೧)ಶಿವಶರಣರ ಸಮಗ್ರ ವಚನ ಸಂಪುಟಗಳನ್ನು ಹಾಗು (೨)ಹರಿದಾಸರ ಸಮಗ್ರ ಕೀರ್ತನ ಸಂಪುಟಗಳನ್ನು ಪ್ರಕಟಗೊಳಿಸಿದ್ದಾರೆ. ಕಲಬುರ್ಗಿಯವರು ತಮ್ಮ ಸಾಧನೆಗಾಗಿ ಅನೇಕ ಪ್ರಶಸ್ತಿಗಳು ಮತ್ತು ಗೌರವಗಳನ್ನು ಪಡೆದಿದ್ದಾರೆ. ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ, ಪಂಪ ಪ್ರಶಸ್ತಿ, ಚಿದಾನಂದ ಪ್ರಶಸ್ತಿ, ನೃಪತುಂಗ ಪ್ರಶಸ್ತಿ, ನಾಡೋಜ ಪ್ರಶಸ್ತಿ ಮತ್ತು ವಿಶ್ವಮಾನವ ಪ್ರಶಸ್ತಿಗಳು ಅವುಗಳಲ್ಲಿ ಕೆಲವು. ಅವರು ಬರೆದಿರುವ ಆರು ಪುಸ್ತಕಗಳು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪುಸ್ತಕ ಬಹುಮಾನಗಳನ್ನು ಪಡೆದಿವೆ.

ಗೌರವಗಳು

'ಕಲಬುರ್ಗಿ–೬೦' ಮತ್ತು 'ಮಹಾಮಾರ್ಗ'ಗಳು ಈ ವಿದ್ವಾಂಸರಿಗೆ ಸಲ್ಲಿಸಿರುವ ಅಭಿನಂದನಾ ಗ್ರಂಥಗಳಲ್ಲಿ ಮುಖ್ಯವಾದವು.

೩೦ನೇ ಆಗಸ್ಟ್, ೨೦೧೫ರಂದು, ಮುಸುಕುಧಾರಿ ದುಷ್ಕರ್ಮಿಗಳ ಗುಂಡಿನ ದಾಳಿಗೆ ಡಾ. ಎಂ.ಎಂ.ಕಲಬುರ್ಗಿ ದೈವದೀನರಾದರು.



### ಕಿರುಪರಿಚಯ
### ಪ್ರೊ. ಬಿ.ಪಿ. ವೀರೇಂದ್ರ ಕುಮಾರ್

ಬಿ.ಎಂ.ಶ್ರೀ. ಪ್ರತಿಷ್ಠಾನದ 'ಲೋಚನ ಕರ್ನಾಟಕ' ಪತ್ರಿಕೆಯ ಸಂಪಾದಕತ್ವವನ್ನು ೨೦೧೯ ರಿಂದ ೨೦೨೧ರವರೆಗೆ ಯಶಸ್ವಿಯಾಗಿ ನಿರ್ವಹಿಸಿದ ಡಾ. ಬಿ.ಪಿ.ವೀರೇಂದ್ರಕುಮಾರ್ ಅವರಿಗೆ ಪ್ರತಿಷ್ಠಾನವು ಕೃತಜ್ಞತೆ ಸಲ್ಲಿಸುತ್ತದೆ.

ಹಳಗನ್ನಡದ ನುರಿತ ವಿದ್ವಾಂಸರಾದ ಪ್ರೊ. ಬಿ. ಪಿ. ವೀರೇಂದ್ರ ಕುಮಾರ್ ಅವರು ೧೯೭೨ ರಲ್ಲಿ ಅಧ್ಯಾಪಕರಾಗಿ ವೃತ್ತಿಯನ್ನಾರಂಭಿಸಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಅಧ್ಯಾಪಕರಾಗಿ, ಉಪಪ್ರಾಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ ಚಳ್ಳಕೆರೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿ ೨೦೦೮ರಲ್ಲಿ ನಿವೃತ್ತರಾದರು.

ಜಾನಪದ ವಿದ್ವಾಂಸರೂ ಆದ ವೀರೇಂದ್ರ ಕುಮಾರ್ ಅವರು ತಾಳಮದ್ದಳೆ: ಒಂದು ಜಾನಪದೀಯ ಅಧ್ಯಯನ, ನಾಯಕನಹಟ್ಟಿ ತಿಪ್ಪೇಸ್ವಾಮಿ– ಒಂದು ಜಾನಪದೀಯ ಅಧ್ಯಯನ, ಎಂಬ ಪ್ರಮುಖ ಅಧ್ಯಯನ ಪೂರ್ಣ ಲೇಖನಗಳನ್ನು ಬರೆದಿರುವುದಲ್ಲದೆ 'ಬುಡಕಟ್ಟು: ವಿಧಿ ಮತ್ತು ಆಚರಣೆ' ಕುರಿತ ಸಂಶೋಧನ ಬರಹ ರಚಿಸಿದ್ದಾರೆ. ಕುಮಾರವ್ಯಾಸನ ದ್ರೌಪದಿ, ರನ್ನನ ಅಜಿತ ಪುರಾಣ, , ಚಾಮ್‌ಸ್ಕಿ" ಕೆಲವು ಟಿಪ್ಪಣಿಗಳು, ಪಂಪ: ಕೆಲವು ಟಿಪ್ಪಣಿಗಳು ಮೊದಲಾದವು ಅವರ ಇನ್ನಿತರ ಲೇಖನಗಳು. ಅವರು ಚಿತ್ರದುರ್ಗ ಜಿಲ್ಲಾ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದರು.




# ಪತ್ರಿಕಾ ನೆನಪು




## ನಗರದಲ್ಲಿ ಇಂದು

ಶಾ.ಬಾಲೂರಾವ್ ಯುವಬರಹಗಾರ ಪ್ರಶಸ್ತಿ ಹಾಗೂ ಶಾ.ಬಾಲೂರಾವ್ ಅನುವಾದ ಪ್ರಶಸ್ತಿ ಪ್ರದಾನ: ಸಾಹಿತಿ ಜಿ.ಎನ್.ರಂಗನಾಥರಾವ್, ಪುರಸ್ಕೃತರು- ಭಾರತೀಯ ಸಂಸ್ಕೃತಿ ಸಂಶೋಧಕ ಹರೀಶ್ ಹಾಗಲವಾಡಿ, ಪತ್ರಕರ್ತ ಪದ್ಮರಾಜ ದಂಡಾವತಿ, ಅಧ್ಯಕ್ಷತೆ- ಬೈರಮಂಗಲ ರಾಮೇಗೌಡ, ಅತಿಥಿಗಳು- ಎಂ.ಎಸ್.ರಘುನಾಥ್, ಆನಂದರಾಮ ಉಪಾಧ್ಯ, ಆಯೋಜನೆ, ಸ್ಥಳ- ಬಿಎಂಶ್ರೀ ಪ್ರತಿಷ್ಠಾನ, ಎಂವಿಸೀ ಸಭಾಂಗಣ.

## ಬಿಎಂಶ್ರೀ ಪ್ರತಿಷ್ಠಾನ ಪ್ರಶಸ್ತಿ ಪ್ರದಾನ

ಬೆಂಗಳೂರು: ಬಿಎಂಶ್ರೀ ಪ್ರತಿಷ್ಠಾನದ ವತಿಯಿಂದ ಸಂಶೋಧಕ ಹರೀಶ್ ಹಾಗಲವಾಡಿ ಅವರಿಗೆ ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ ಹಾಗೂ ಹಿರಿಯ ಪತ್ರಕರ್ತ ಡಾ. ಪದ್ಮರಾಜ ದಂಡಾವತಿ ಅವರಿಗೆ ಶಾ. ಬಾಲೂರಾವ್ ಅನುವಾದ ಪ್ರಶಸ್ತಿ ಪ್ರದಾನ ಕಾರ್ಯಕ್ರಮ ಭಾನುವಾರ ನಡೆಯಲಿದೆ. ಬಿಎಂಶ್ರೀ ಸಂಸ್ಥೆಯ ಎಂವಿಸೀ ಸಭಾಂಗಣದಲ್ಲಿ ಬೆಳಗ್ಗೆ 10.30ಕ್ಕೆ ಹಿರಿಯ ಸಾಹಿತಿ ಡಾ. ಜಿ.ಎನ್. ರಂಗನಾಥ ರಾವ್ ಪ್ರಶಸ್ತಿ ಪ್ರದಾನ ಮಾಡಲಿದ್ದಾರೆ. ಪ್ರಶಸ್ತಿ ಪುರಸ್ಕೃತರನ್ನು ಕುರಿತು ಪ್ರೊ. ಎಂ.ಎಸ್. ರಘುನಾಥ್ ಹಾಗೂ ಡಾ. ಆನಂದರಾಮ ಉಪಾಧ್ಯ ಮಾತನಾಡಲಿದ್ದಾರೆ.

ಹರೀಶ್ ಹಾಗಲವಾಡಿ

**ಸರ್ ಸಿ.ವಿ. ರಾಮನ್ ವಿಜ್ಞಾನ ಉಪನ್ಯಾಸ:** ವಿಷಯ: ಸರ್.ಸಿ.ವಿ. ರಾಮನ್ ಆವಿಷ್ಕಾರ ಮತ್ತು ವಿಶೇಷ ವ್ಯಕ್ತಿತ್ವ, ಭಾಗವಹಿಸುವವರು: ಎ.ಎಸ್. ಗೋವಿಂದ್, ಅಧ್ಯಕ್ಷತೆ: ಬೈರಮಂಗಲ ರಾಮೇಗೌಡ, ಉಪಸ್ಥಿತಿ: ಬಿ.ಸಿ. ರಾಜಕುಮಾರ್, ಆಯೋಜನೆ: ಬಿ.ಎಂ.ಶ್ರೀ. ಪ್ರತಿಷ್ಠಾನ (ಆನ್‌ಲೈನ್ ಕಾರ್ಯಕ್ರಮ) ಸಂಜೆ 4


ಬಿಎಂಶ್ರೀ ಪ್ರತಿಷ್ಠಾನ ಭಾನುವಾರ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಪತ್ರಕರ್ತ ಡಾ.ಪದ್ಮರಾಜ ದಂಡಾವತಿಗೆ ಬಾಲುರಾವ್ ಅನುವಾದ ಪ್ರಶಸ್ತಿ ಹಾಗೂ ಭಾರತೀಯ ಸಂಸ್ಕೃತಿ ಸಂಶೋಧಕ ಹರೀಶ್ ಹಾಗಲವಾಡಿಗೆ ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ ಪ್ರದಾನ ಮಾಡಲಾಯಿತು. ಪ್ರತಿಷ್ಠಾನದ ಅಧ್ಯಕ್ಷ ಡಾ. ಬೈರಮಂ ರಾಮೇಗೌಡ, ಸಾಹಿತಿ ಡಾ. ಜಿ.ಎನ್. ರಂಗನಾಥರಾವ್ ಮತ್ತಿತರರು ಉಪಸ್ಥಿತರಿದ್ದರು.

## ಬಿ.ಎಂ.ಶ್ರೀ. ದತ್ತಿ ಪ್ರಶಸ್ತಿಗೆ ನಾಟಕ ಕೃತಿ ಆಹ್ವಾನ

ಬೆಂಗಳೂರು: ಬಿ.ಎಂ.ಶ್ರೀ. ಪ್ರತಿಷ್ಠಾನವು 2020ನೇ ಸಾಲಿನ ಸಾರಂಗಿ ವೆಂಕಟ ರಾಮಯ್ಯ-ಪುಟ್ಟಚ್ಚಮ್ಮ ಸ್ಮಾರಕ ದತ್ತಿ ಪ್ರಶಸ್ತಿಗೆ ನಾಟಕ ಕೃತಿಗಳನ್ನು ಆಹ್ವಾನಿಸಿದೆ. ಈ ಪ್ರಶಸ್ತಿಯು ₹ 3 ಸಾವಿರ ನಗದನ್ನು ಒಳಗೊಂಡಿದೆ. 2020ರಲ್ಲಿ ಪ್ರಥಮ ಮುದ್ರಣಗೊಂಡ ಕೃತಿಗಳನ್ನು ಮಾತ್ರ ಪ್ರಶಸ್ತಿಗೆ ಪರಿಗಣಿಸಲಾಗುತ್ತ- ದೆ. ಈ ಸ್ಪರ್ಧೆಯು ಉದಯೋನ್ಮುಖ ಸಾಹಿತಿಗಳಿಗೆ ಮಾತ್ರ ಸೀಮಿತವಾಗಿದ್ದು, ಅವರು ಗರಿಷ್ಠ 2 ಕೃತಿಗಳನ್ನು ಪ್ರಕಟಿಸಿ ರಬೇಕು. ಮೊದಲ ಕೃತಿಗೆ ಆದ್ಯತೆ ನೀಡ ಲಾಗುವುದು. ಅರ್ಹರು ಕೃತಿಯ 3 ಪ್ರತಿಗ ಳನ್ನು ಡಿ.12ರೊಳಗೆ ಪ್ರತಿಷ್ಠಾನಕ್ಕೆ ಕಳುಹಿಸಬೇಕು ಎಂದು ಪ್ರಕಟಣೆ ತಿಳಿಸಿದೆ. ಸಂಪರ್ಕ: 080-26615877

HOOL KODAGU
f Defence, Govt. of India)



### ಕಿರು ಪರಿಚಯ



## ಶಾ. ಬಾಲುರಾವ್

ಶಾ ಬಾಲು ರಾವ್ ಅವರು ಅಕ್ಟೋಬರ್ ೧೯೨೯ ರಲ್ಲಿ ಮೈಸೂರಿನಲ್ಲಿ ಜನಿಸಿದರು.

ಶಾ ಬಾಲು ರಾವ್ ಅವರು ಪತ್ರಿಕೋದ್ಯಮವನ್ನು ಮುಂದುವರಿಸಲು ಇಂಟರ್ ಮೀಡಿಯೇಟ್ ನಂತರ ತಮ್ಮ ವ್ಯಾಸಂಗವನ್ನು ತ್ಯಜಿಸಿದರು. ಅವರ ವಿದ್ಯಾಭ್ಯಾಸದ ನಂತರ ಕೆಲಕಾಲ ಪತ್ರಕರ್ತರಾಗಿ ಕೆಲಸ ಮಾಡಿದರು. ೧೯೫೪ರಲ್ಲಿ ಅವರು ಸಾಹಿತ್ಯ ಅಕಾಡೆಮಿಯಲ್ಲಿ ಪ್ರಕಟನಾ ಸಹಾಯಕರಾಗಿ ಸೇರಿದರು. ನಂತರ ಅವರು ಜರ್ಮನ್ ಸಾಹಿತ್ಯದ ಸಹಾಯಕ ಸಂಪಾದಕರಾದರು. ಮುಂದೆ ಅವರು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಕಟಿಸುವ ?ಇಂಡಿಯನ್ ಲಿಟರೇಚರ್? ಇಂಗ್ಲೀಷ್ ಪತ್ರಿಕೆಯ ಸಂಪಾದಕರಾಗಿ ೧೯೯೦ರಲ್ಲಿ ನಿವೃತ್ತರಾದರು. ನಂತರ ಅವರ ಕೊನೆಗಾಲದವರೆಗೆ ದೆಹಲಿಯಲ್ಲೇ ವಾಸವಾಗಿದ್ದರು. ಅವರು ೧೮ನೇ ಜನವರಿ ೨೦೦೧ ರಂದು ಹಠಾತ್ತನೆ ಹೃದಯಾಘಾತದಿಂದ ನಿಧನ ಹೊಂದಿದರು.

ಶಾ. ಬಾಲುರಾವ್ ಅವರ ಹದಿನೆಂಟು ಕೃತಿಗಳು ಲಭ್ಯವಾಗಿವೆ. ಅವುಗಳಲ್ಲಿ ಎಂಟು ಕವನ ಸಂಕಲನಗಳಿವೆ: ಅದರಲ್ಲೊಂದು ಇಂಗ್ಲಿಷ್ ಕವಿತೆಗಳ ಸಂಕಲನ; ನಾಲ್ಕು ವಿವಿಧ ಭಾಷಾಕವಿಗಳ ಕವನಗಳನ್ನು ಆಯಾ ಭಾಷೆಗಳಿಂದಲೇ ನೇರವಾಗಿ ಮಾಡಿದ ಅನುವಾದಿತ ಕವನಗಳನ್ನು ಒಳಗೊಂಡಿವೆ. ಎರಡು ಸ್ವತಂತ್ರ ಕಿರು ನಾಟಕಗಳಿವೆ; ಜೊತೆಗೆ ಮಕ್ಕಳಿಗಾಗಿ ರಚಿಸಿದ ನಾಲ್ಕು ಕೃತಿಗಳಿವೆ; ಆನಂತರ ಮೂರು ಅನುವಾದಿತ ಕೃತಿಗಳಿವೆ:

ರಷ್ಯನ್ ಭಾಷೆಯನ್ನು ಕಲಿತು ಆನಾ ಅಹ್ಮತೋವಾಳ ಕವಿತೆಗಳನ್ನು ಕನ್ನಡಕ್ಕೆ ನೇರವಾಗಿ ಅನುವಾದ ಮಾಡಿರುವುದು, ಬೆರ್ಟೋಲ್ಟ್ ಬ್ರೆಷ್ಟ್ ರ ಎಂಬತ್ತು ಕವಿತೆಗಳನ್ನು ಜರ್ಮನ್ ಭಾಷೆಯಿಂದ ನೇರವಾಗಿ ಕನ್ನಡಕ್ಕೆ ಅನುವಾದ ಮಾಡಿರುವುದು, ಬಂಗಾಳಿಯಿಂದ ನೇರವಾಗಿ ಸುಭಾಷ್ ಮುಖೋಪಾಧ್ಯಾಯ ಅವರ ಕವಿತೆಗಳನ್ನು ಕನ್ನಡಕ್ಕೆ ಅನುವಾದ ಮಾಡಿರುವುದು, ಉಮ್ರ ಖಯ್ಯಾಮ್ ನ ೧೦೧ ರೂಬಾಯಿಗಳ ಅನುವಾದ ಮಾಡಿರುವುದು, ಶಾ. ಬಾಲು ರಾವ್ ಅವರ ದೊಡ್ಡ ಸಾಧನೆಗಳು.

ನಮ್ಮ ಸಾಹಿತ್ಯಕ್ಕೆ ಅವರು ಮಾಡಿದ ಮತ್ತೊಂದು ದೊಡ್ಡ ಕೊಡುಗೆಯೆಂದರೆ ಅವರು 'ಷೇಕ್‌ಸ್ಪಿಯರ್‌ಗೆ ನಮಸ್ಕಾರ'. ಈ ಪುಸ್ತಕ ಕನ್ನಡದಲ್ಲಿ ಯಾರೂ ಮೀರಲಾಗದ ಎತ್ತರವೊಂದನ್ನು ತೋರಿಸಿಕೊಟ್ಟಿದೆ. ಅವರು ಈ ಪುಸ್ತಕದ ಸಂಪಾದಕರಾಗಿದ್ದರು.

ಜೀವನ ಪರ್ಯಂತ ಶಾ. ಬಾಲುರಾವ್ ಅವರು ಅನುವಾದದೆಡೆಗೆ ಬಹುವಾಗಿ ಆಕರ್ಷಿತರಾದವರಾಗಿದ್ದರು. ಜೊತೆಗೆ ಅವರು ಯುವಜನರನ್ನು ಹಲವು ರೀತಿಗಳಲ್ಲಿ ಪ್ರೋತ್ಸಾಹಿಸುತ್ತಿದ್ದರು.

ಈ ಕಾರಣದಿಂದ ಅವರ ಪತ್ನಿ ಶ್ರೀಮತಿ ಕಮಲಿನಿ ಅವರು ಶಾ. ಬಾಲು ರಾವ್ ಅನುವಾದ ಪ್ರಶಸ್ತಿ ಹಾಗೂ ಶಾ. ಬಾಲುರಾವ್ ಯುವಬರಹಗಾರ ಪ್ರಶಸ್ತಿಗಳ ದತ್ತಿಯನ್ನು ಬಿಎಂಶ್ರೀ ಪ್ರತಿಷ್ಠಾನದಲ್ಲಿ ಸ್ಥಾಪಿಸಿರುತ್ತಾರೆ.

ಶ್ರೀಮತಿ ಕಮಲಿನಿ ಅವರು ಬಿಎಂಶ್ರೀ ಅವರ ಮೊಮ್ಮಗಳು ಅಂದರೆ ಅವರ ಮಗಳ ಮಗಳು. ಶಾ ಬಾಲುರಾವ್ ಅವರಿಗೆ ಈ ಬಗ್ಗೆ ಬಹಳ ಹೆಮ್ಮೆಯಿತ್ತು. ಶ್ರೀಮತಿ ಕಮಲಿನಿ ಅವರು ಬಿಎಂಶ್ರೀ ಪ್ರತಿಷ್ಠಾನದ ಬಗ್ಗೆ ಅಪಾರ ಅಭಿಮಾನ ಇಟ್ಟುಕೊಂಡಿದ್ದಾರೆ.



# ಎಂ.ವಿ.ಸಿ. ಬದುಕು ಬರಹ – ೨೨

– ಡಾ. ಪಿ.ವಿ. ನಾರಾಯಣ

ಹಿಂದಿನಸಂಚಿಕೆಯಿಂದ

**ಹೀಗೆಯೇ** 'ದಾದಿರನ್ನೆ' ಮತ್ತೊಂದು ಯಶಸ್ವೀ ಕವನ. ತನ್ನ ಮಗನ ಓರಗೆಯ ರಾಜಪುತ್ರ ಉದಯಸಿಂಹನನ್ನು ಶತ್ರುಗಳಿಂದ ಕಾಪಾಡಲು ಅವನನ್ನು ಹಣ್ಣಿನ ಬುಟ್ಟಿಯಲ್ಲಿ ಸಾಗಿಸಿ ಅರಮನೆಯಲ್ಲಿ ರಾಜನುಡುಗೆಯಲ್ಲಿ ಮಗನನ್ನೇ ಪನ್ನೆ ಮಲಗಿಸಿದ್ದಾಗ ಬಂದ ಬನವೀರನೆಂಬ ಶತ್ರು ಉದಯಸಿಂಹನನ್ನು ತೋರಿಸದಿದ್ದರೆ ಅವಳ ಮಗ ಭಾಲನನ್ನೇ ಕೊಲ್ಲುವೆನೆಂದುದಲ್ಲದೆ ಹಾಗೆಯೇ ಮಾಡಿಬಿಡುತ್ತಾನೆ. ದುಃಖದ ಮಡುವಿನಲ್ಲಿ ಸಿಲುಕಿದ ತಾಯಿಯ ಎದುರು ಹಿಂಸಾರೂಪಿಯಾದ ಬನವೀರ ಸಡಗರಪಡುವ ಚಿತ್ರ ಹಿಂಸೆಯ ಸಾರ್ವಕಾಲಿಕತೆಯನ್ನು ತೋರಿಸುತ್ತದೆ. 'ಬೀದಿ ಸೂಳೆ'ಯ ಬಗ್ಗೆ ಹಿಂದೆಯೇ ಕೆಲವು ಮಾತುಗಳನ್ನಾಡಿದೆ. ಇವೆಲ್ಲದರ ಜೊತೆಗೆ ಆಲ್‌ಫ್ರೆಡ್ ಟೆನಿಸನ್‌ನ 'ಡೋರ'ವನ್ನು ಎಂವಿಸೀ ಸರಳರಗಳೆಯಲ್ಲಿ ಅನುವಾದಿಸಿದ್ದಾರೆ.

ಒಟ್ಟಾರೆ 'ರಾಘವ' ಕಾವ್ಯನಾಮದ ಎಂವಿಸೀ ಅವರು ಸಾಕಷ್ಟು ಸಂಖ್ಯೆಯ ಕವನಗಳನ್ನು ಬರೆದವರು. ಯಾವೊಬ್ಬ ಕವಿಯ ರಚನೆಗಳೆಲ್ಲ ಒಂದೇ ಮಟ್ಟದವಾಗಿರಲು ಸಾಧ್ಯವಿಲ್ಲ ಹಾಗೆಯೇ ರಾಘವರ ಕವನಗಳೂ. ಅವರ 'ಹಕ್ಕಿಹಾಡು' ಸಂಕಲನವನ್ನು ಕುರಿತು ಮಾಸ್ತಿಯವರು ಈ ಮಾತುಗಳನ್ನಾಡಿದ್ದರು: "'ಹಕ್ಕಿ ಹಾಡು' ಉದ್ದಕ್ಕೂ ಒಂದು ಮಟ್ಟದಲ್ಲಿಲ್ಲ. ಇದು ಸಾಧ್ಯವಲ್ಲ. ಅಲ್ಲಲ್ಲಿ ಮಾತು ಬೇರೆಯಾಗಿರ ಬಹುದೆನಿಸುತ್ತದೆ. ಆದರೆ ಒಟ್ಟಿನಲ್ಲಿ ಇದು ಒಳ್ಳೆಯ ಕೃತಿ." ಆ ಮುಂದೆ ರಂ.ಶ್ರೀ. ಮುಗಳಿ ಅವರು ರಾಘವ ಅವರ ಕಾವ್ಯದ ಬಗ್ಗೆ ಒಟ್ಟು ನೋಟವನ್ನು ನೀಡಿ ಈ ಅಭಿಪ್ರಾಯವನ್ನು ವಕ್ತ ಪಡಿಸಿದ್ದಾರೆ: "ಒಟ್ಟು ನೋಟದಲ್ಲಿ ರಾಘವ ಅವರು ತಮ್ಮ ಸುದೀರ್ಘವಾದ ಕಾವ್ಯಸಾಧನೆಯಲ್ಲಿ ಗಟ್ಟಿಯಾದ ವ್ಯಕ್ತಿತ್ವವನ್ನು ಬೆಳೆಸಿಕೊಂಡು ಆಧುನಿಕ ಕಾವ್ಯಪ್ರಪಂಚಕ್ಕೆ ಯಾವಾಗಲೂ ಸಹೃದಯರನ್ನು ಮೆಚ್ಚಿಸಬಲ್ಲ ಕೆಲವು ಒಳ್ಳೆಯ ಕವನಗಳನ್ನು ರಚಿಸಿಕೊಟ್ಟಿದ್ದಾರೆ ಅಲ್ಲಲ್ಲಿ ಹಿರಿಮೆಗೆ ಏಳ್ಗೆವೆತ್ತಿದ್ದಾರೆ. ವಿಷಯ, ಶೈಲಿ, ಛಂದಸ್ಸು, ಗಾತ್ರಗಳಲ್ಲಿ ಹಲವಾರು ಪ್ರಯೋಗಗಳನ್ನು ಮಾಡಿದ್ದಾರೆ, 'ತೇಜವಿಲ್ಲವೊ ಏನೋ' ಎಂಬ ಅನುಮಾನದಿಂದ ತಮ್ಮ ಕವಿತೆಯ ಕಿರುಸೊಡರನ್ನು ಕನ್ನಡ ಕಾವ್ಯದ ಮಹಾಮನೆಯಲ್ಲಿ ಹೊತ್ತಿಸಿ ಹೊರಟ ಅವರು ತಮ್ಮ ಪರಿಪಕ್ವ ಅನುಭವದ ಮತ್ತು ಪಳಗಿದ ಅಭಿವ್ಯಕ್ತಿಯ ಮೂಲಕ 'ತೇಜವಿಲ್ಲವೆಂದೇಕೆ ತಿಳಿಯುವಿರಿ?' ಎಂದು ರಸಿಕರು ಕೇಳುವಂತೆ ಮಾಡಿದ್ದಾರೆ."

ನವೋದಯದ ಮೊದಲ ಹಂತದಲ್ಲಿ ಇಡೀ ಕನ್ನಡ ಸಾಹಿತ್ಯ ಕ್ಷೇತ್ರ ಕನ್ನೆನೆಲವಾಗಿತ್ತು. ಮಾಡಿದುದೆಲ್ಲ ಪ್ರಯೋಗ, ಬರೆದುದೆಲ್ಲ ಹೊಸತು ಎನ್ನುವಂತಿತ್ತು. ಆದರೆ ರಾಘವರು ಸಾಹಿತ್ಯರಚನೆಗೆ ಕೈಹಾಕಿದ್ದು ಆ ಭರತ ಮುಗಿದ ಮೇಲೆ. ಜೊತೆಗೆ ಸ್ವೋಪಜ್ಞತೆಯ ಮಿತಿಯಿಂದಾಗಿಯೂ, ಹಿರಿಯರ ಆಸರೆಯ ನೆರಳಲ್ಲಿಯೂ ಬೆಳೆದು ಇವರು ಹೊಸಮಾರ್ಗವನ್ನು ಕನ್ನಡ ಕಾವ್ಯಕ್ಷೇತ್ರದಲ್ಲಿ ಹುಟ್ಟುಹಾಕಲು ಸಾಧ್ಯವಾಗಲಿಲ್ಲ. ಯಾವುದೇ ಕಾಲದಲ್ಲಿ ಬರೆದರೆಲ್ಲ ಒಂದೇ ಮಟ್ಟದವರಾಗಿರುವುದಿಲ್ಲ; ಶ್ರೇಷ್ಠರು ಬರೆದವೆಲ್ಲವೂ ಒಂದೆ ಗುಣದವಾಗಿರಲು ಸಾಧ್ಯವಿಲ್ಲ. ನಿಸರ್ಗದ ಸೌಂದರ್ಯವಿರುವುದು ಕೇವಲ ಗಗನದೆತ್ತರದ ಬೃಹತ್ ಗಾತ್ರದ ಮರಗಳಲ್ಲಿ ಮಾತ್ರವಲ್ಲ; ಎಲ್ಲ ಎತ್ತರದ ಎಲ್ಲ ಬಣ್ಣಗಳ ಎಲ್ಲ ಗಾತ್ರಗಳ ಸಸ್ಯರಾಶಿಯಿಂದ. ಹಾಗೆಯೇ ಭಾಷೆಯೊಂದರ ಸಾಹಿತ್ಯ ಸಮೃದ್ಧವಾಗಿರುವುದು ಎಲ್ಲ ಬಗೆಯ ಬರಹಗಾರರ ರಚನೆಗಳಿಂದ. ಲೋಕದಲ್ಲಿ ಮರ್ಯಾದೆ ಸಮುದ್ರಕ್ಕೆ ಮಾತ್ರವಲ್ಲ, ತೊರೆನದಿಗಳಿಗೂ, ಕೆರೆಕುಂಟೆಗಳಿಗೂ, ಬಾವಿಚಿಲುಮೆಗಳಿಗೂ ಸಲ್ಲಬೇಕು. ಹಾಗೆಯೇ ಹಲವಾರು ಒಳ್ಳೆಯ ಕವನಗಳನ್ನಿತ್ತ 'ರಾಘವ'ರ ಕಾವ್ಯಕೃಷಿಗೆ ತನ್ನದೇ ಸ್ಥಾನವಿದೆ, ತನ್ನದೇ ಬೆಲೆಯಿದೆ.

( ಮುಂದುವರಿಯುವುದು)

---


HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2021-2023
dt. 28-12-2020
Office of Posting: Bangalore PSO, Bangalore 560026
Price : Annual Subscription Rs. 20/-
Date of publishing and Posting : 30-11-2021





**Printed and published by** : B.R.Ravindranath on behalf of the BMSRI SMARAKA PRATISHTANA, B.M.Sri Pratishtana Road, (3rd Main Road) NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10 . and published at BMSRI SMARAKA PRATISHTANA, B.M.Sri Pratishtana Road, 3rd Main Road, NR Colony, Bangalore - 560019 Editor : **B.R.Ravindranath**


**ಅಚ್ಚಾದ ಪುಸ್ತಕ**

ಶ್ರೀಮತಿ/ಶ್ರೀ..........................................................................

..........................................................................................

..........................................................................................


ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭